CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೩೯ | ಬೆಂಗಳೂರು, ಗುರುವಾರ, ನವೆಂಬರ್ ೨೫, ೨೦೦೪ (ಮಾರ್ಗಶಿರ ೪, ಶಕ ವರ್ಷ ೧೯೨೬) | ಸಂಚಿಕೆ ೪೭ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಟಿ.ವಿ. ಸೂರ್ಯನಾರಾಯಣರಾವ್, ನಿವೃತ್ತ ಹಿರಿಯ ಉಪ ನೋಂದಣಾಧಿಕಾರಿ, ಗಂಗಾವತಿ ಇವರಿಗೆ ತಡವಾಗಿ ಪಾವತಿಸಲಾದ ಡಿ.ಸಿ.ಆರ್.ಜಿ. ಮೊಬಲಗು ಮೇಲೆ ಬಡ್ಡಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಗೌ: ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಲ್ಲಿಸಲಾದ ಅರ್ಜಿ ಸಂಖ್ಯೆ: 5163/2001 ರಲ್ಲಿ ದಿನಾಂಕ: 29.1.03 ರಂದು ನೀಡಲಾದ ಆದೇಶ.
2) ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ. (ಸ್ಪೆಷಲ್) 199 ಪಿಇಎನ್ 93 ದಿನಾಂಕ: 13.9.94.
3) ಸರ್ಕಾರದ ಸುತ್ತೋಲೆ ಸಂಖ್ಯೆ: ಆಇ (ವಿಶೇಷ) 1 ಪಿಇಎನ್ 04, ದಿನಾಂಕ: 2.9.2004.
4) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರ ಪತ್ರ ಸಂಖ್ಯೆ: PV 6/R3/R 5756 (PV 13) 669, ದಿನಾಂಕ: 17.9.2004.
5) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ರವರ ಪತ್ರ ಸಂಖ್ಯೆ: ಪಿ.ಇ.ಎನ್. 15/99-2000, ದಿನಾಂಕ: 5.10.2004.

**ಪ್ರಸ್ತಾವನೆ:-**

ಶ್ರೀ ಟಿ.ವಿ. ಸೂರ್ಯನಾರಾಯಣರಾವ್, ನಿವೃತ್ತ ಹಿರಿಯ ಉಪ ನೋಂದಣಾಧಿಕಾರಿ, ಗಂಗಾವತಿ ಇವರು ದಿನಾಂಕ: 31.12.99 ರಂದು ವಯೋನಿವೃತ್ತಿ ಹೊಂದಿದ್ದು, ಇವರಿಗೆ ಸಕಾಲದಲ್ಲಿ ನಿವೃತ್ತಿ ಸೌಲಭ್ಯಗಳಲ್ಲಿ ಒಂದಾದ ಡಿ.ಸಿ.ಆರ್.ಜಿ. ಮೊತ್ತವನ್ನು ಪಾವತಿಸಲು ತಡವಾದುದಕ್ಕಾಗಿ ಸದರಿಯವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸರ್ಕಾರದ ವಿರುದ್ಧ ಅರ್ಜಿ ಸಂಖ್ಯೆ: 5163/2001 ರಲ್ಲಿ ಸಲ್ಲಿಸಿದ್ದರ ಮೇರೆಗೆ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಮೇಲೆ ಓದಲಾದ-1 ರಲ್ಲಿ ದಿನಾಂಕ: 29.1.2003 ರಲ್ಲಿ ನೀಡಿರುವ ಆದೇಶದಲ್ಲಿ ತಡೆಹಿಡಿದಿರುವ ಡಿ.ಸಿ.ಆರ್.ಜಿ. ಮೊತ್ತವನ್ನು ಮತ್ತು ಇದರ ಮೇಲೆ ಶೇಕಡ 12 ರಷ್ಟು ಬಡ್ಡಿಯನ್ನು ಕೆ.ಎ.ಟಿ. ಆದೇಶವು ತಲುಪಿದ ದಿನಾಂಕದಿಂದ 90 ದಿನಗಳ ಒಳಗೆ ಪಾವತಿಸುವಂತೆ ಆದೇಶಿಸಿದೆ. ಒಂದು ವೇಳೆ ನಿಗದಿತ ಅವಧಿಯೊಳಗೆ ಡಿ.ಸಿ.ಆರ್.ಜಿ. ಮೊತ್ತವನ್ನು ಪಾವತಿಸದಿದ್ದಲ್ಲಿ ಎರಡನೇ ಪ್ರತಿವಾದಿಯಾದ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಇವರಿಂದ ರೂ. 3,000.00 (ಮೂರು ಸಾವಿರ) ಗಳನ್ನು ವಸೂಲು ಮಾಡಿ ಅರ್ಜಿದಾರರಿಗೆ ಪಾವತಿಸುವಂತೆ ಆದೇಶಿಸಿದೆ.

ಮೇಲೆ 1 ರಲ್ಲಿ ಓದಲಾದ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶದನ್ವಯ ಮಹಾಲೇಖಪಾಲರು (ಎ ಮತ್ತು ಇ), ಕರ್ನಾಟಕ, ಬೆಂಗಳೂರು ಇವರು ಮೇಲೆ ಓದಲಾದ 4ರ ಪತ್ರದಲ್ಲಿ ಶ್ರೀ ಟಿ.ವಿ. ಸೂರ್ಯನಾರಾಯಣರಾವ್, (ನಿ) ಹಿರಿಯ ಉಪ ನೋಂದಣಾಧಿಕಾರಿ ಇವರಿಗೆ ಡಿ.ಸಿ.ಆರ್.ಜಿ. ಮೊತ್ತ ರೂ. 1,35,300 ಗಳನ್ನು ಬಿಡುಗಡೆಗೊಳಿಸಬೇಕಾಗಿದ್ದು, ಈ ಪೈಕಿ ರೂ. 75,900 ಗಳನ್ನು ಸದರಿ ನಿವೃತ್ತ ಅಧಿಕಾರಿಯವರು ಅವರ ಸೇವಾ ಅವಧಿಯಲ್ಲಿ ಸರ್ಕಾರಕ್ಕೆ ರಾಜಸ್ವ ನಷ್ಟ ಉಂಟು ಮಾಡಿದ್ದಕ್ಕಾಗಿ ಕಡಿತಗೊಳಿಸಿ ಉಳಿದ ಡಿ.ಸಿ.ಆರ್.ಜಿ. ಮೊತ್ತ ರೂ. 59,400 ಗಳನ್ನು ಬಿಡುಗಡೆಗೊಳಿಸಿರುತ್ತಾರೆ.

ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶದನ್ವಯ ಡಿ.ಸಿ.ಆರ್.ಜಿ. ಮೊತ್ತ ರೂ. 59,400 ಗಳಿಗೆ ಮೇಲೆ ಓದಲಾದ-3 ರ ಸರ್ಕಾರಿ ಸುತ್ತೋಲೆ ದಿನಾಂಕ: 2.9.2004 ರನ್ವಯ ದಿನಾಂಕ: 1.4.2000 ರಿಂದ 20.8.2003 ರವರೆಗೆ ಶೇ. 12 ರಂತೆ ಬಡ್ಡಿ ಹಣ ರೂ. 24,150 ಗಳು

ಹಾಗೂ ದಿನಾಂಕ; 21.8.2003 ರಿಂದ 31.8.2004 ರವರೆಗೆ ಶೇ. 8 ರಂತೆ ಡಿ.ಸಿ.ಆರ್.ಜಿ. ಮೊತ್ತ ರೂ. 59,400 ಗಳಿಗೆ ಬಡ್ಡಿ ರೂ. 4,894 ಗಳು ಸೇರಿ ಒಟ್ಟು ಮೊತ್ತ ರೂ. 29,044 ಗಳನ್ನು ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 59 ಮುನೋಸೇ (3) 2001, ಬೆಂಗಳೂರು, ದಿನಾಂಕ: 8ನೇ ಅಕ್ಟೋಬರ್ 2004**

ಮೇಲೆ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಟಿ.ವಿ. ಸೂರ್ಯನಾರಾಯಣರಾವ್, ನಿವೃತ್ತ ಹಿರಿಯ ಉಪ ನೋಂದಣಾಧಿಕಾರಿ, ಗಂಗಾವತಿ ಇವರಿಗೆ ತಡವಾಗಿ ಪಾವತಿಸಲಾದ ಡಿ.ಸಿ.ಆರ್.ಜಿ. ಮೊತ್ತ ರೂ. 59,400 ಗಳಿಗೆ ಶೇ. 12 ಮತ್ತು ಶೇ. 8 ರಂತೆ ದಿನಾಂಕ: 1.4.2000 ರಿಂದ 31.8.2004 ರವರೆಗೆ ತಗಲುವ ಬಡ್ಡಿ ರೂ. ಒಟ್ಟು 29,044 (ಇಪ್ಪತ್ತೊಂಭತ್ತು ಸಾವಿರದ ನಲವತ್ತ ನಾಲ್ಕು) ಗಳನ್ನು ಪಾವತಿಸಲು ಆದೇಶಿಸಿದೆ.

ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ 2049-60-701-3-01 ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/1060/ವೆಚ್ಚ-7/2004 ದಿನಾಂಕ: 8.10.2004 ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1199

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ತಿದ್ದುಪಡಿ**

**ಸಂಖ್ಯೆ: ಕಂಇ 681 ಮುನೋಮು 2004, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 407 ಮುನೋಮು 98, ದಿನಾಂಕ; 8.9.2004 ರ ನಾಲ್ಕನೇ ಸಾಲಿನಲ್ಲಿರುವ "ಮೆ: ಇಂಟರ್‌ನ್ಯಾಷನಲ್ ಟೆಕ್ನಾಲಜಿ ಪಾರ್ಕ್ ಲಿಮಿಟೆಡ್" ಎಂಬ ಪದವನ್ನು "ಮೆ: ಇನ್‌ಫಾರ್ಮೇಷನ್ ಟೆಕ್ನಾಲಜಿ ಪಾರ್ಕ್ ಲಿಮಿಟೆಡ್" ಎಂದೂ ಮತ್ತು 6ನೇ ಸಾಲಿನಲ್ಲಿರುವ "ಖರೀದಿಸಿ" ಎಂಬ ಪದವನ್ನು "ಖರೀದಿಸಿದ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1200

**ಡಿ.ಎನ್. ಶ್ರೀಮುಖಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇಲ್ಲಿ ದಿನಾಂಕ: 25.10.2004 ರಿಂದ 27.10.2004 ರವರೆಗೆ ನಡೆಯಲಿರುವ "ಸ್ಥಾನಪಲ್ಲಟ ಮತ್ತು ಪುನರ್ವಸತಿ" (Displacement and Rehabilitation) ಕುರಿತ ತರಬೇತಿಗೆ ಕೆ.ಎ.ಎಸ್. (ಕಿ.ಶ್ರೇ) ಅಧಿಕಾರಿಗಳನ್ನು ನಿಯೋಜಿಸುವ ಬಗ್ಗೆ ಆದೇಶ.

**ಓದಲಾಗಿದೆ:** ಜಂಟಿ ನಿರ್ದೇಶಕರು (ತರಬೇತಿ) ಮತ್ತು ತರಬೇತಿ ನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ ಮೈಸೂರು ಇವರ ಪತ್ರ ಸಂಖ್ಯೆ: ತರಬೇತಿ (ಜಂನಿತ) 47/2004-05, ದಿನಾಂಕ: 20.9.2004.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 20.9.2004ರ ಪತ್ರದಲ್ಲಿ ಮೈಸೂರಿನ ಆಡಳಿತ ತರಬೇತಿ ಸಂಸ್ಥೆಯಲ್ಲಿ ದಿನಾಂಕ: 25.10.2004 ರಿಂದ 27.10.2004 ರವರೆಗೆ ಭಾರತ ಸರ್ಕಾರದ ಪ್ರಾಯೋಜಿತ "ಸ್ಥಾನಪಲ್ಲಟ ಮತ್ತು ಪುನರ್ವಸತಿ" (Displacement and Rehabilitation) ಕುರಿತ ತರಬೇತಿ ಕಾರ್ಯಕ್ರಮವನ್ನು ಹಮ್ಮಿಕ್ಕೊಳ್ಳಲಾಗಿದ್ದು, ಐದು ಸಹಾಯಕ ಕಮಿಷನರ್‌ಗಳನ್ನು ತರಬೇತಿಗೆ ನಿಯೋಜಿಸಲು ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 367 ಆಸೇಇ 2004, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2004**

ಸರ್ಕಾರವು ಈ ಕೆಳಕಂಡ ಕೆ.ಎ.ಎಸ್. ಕಿರಿಯ ಶ್ರೇಣಿ ಅಧಿಕಾರಿಗಳನ್ನು ಮೈಸೂರಿನ ಆಡಳಿತ ತರಬೇತಿ ಸಂಸ್ಥೆಯಲ್ಲಿ ದಿನಾಂಕ: 25.10.2004 ರಿಂದ 27.10.2004 ರವರೆಗೆ ಹಮ್ಮಿಕ್ಕೊಳ್ಳಲಾಗಿರುವ "ಸ್ಥಾನಪಲ್ಲಟ ಮತ್ತು ಪುನರ್ವಸತಿ" ಕುರಿತ ತರಬೇತಿಗೆ ನಿಯೋಜಿಸಿದೆ.

1. ಶ್ರೀ ಎಸ್.ಪಿ. ಕುಲಕರ್ಣಿ, ವಿಶೇಷ ಭೂಸ್ವಾಧೀನಾಧಿಕಾರಿ ಕೃಷ್ಣ ಮೇಲ್ದಂಡೆ ಯೋಜನೆ, ಭೀಮರಾಯನಗುಡಿ.
2. ಶ್ರೀ ಬಿ.ಎಫ್. ತಳವಾರ್, ವಿಶೇಷ ಭೂಸ್ವಾಧೀನಾಧಿಕಾರಿ, ಮಲಪ್ರಭ ಮತ್ತು ಘಟಪ್ರಭ ಪ್ರಾಜೆಕ್ಟ್, ಸವದತ್ತಿ, ಬೆಳಗಾವಿ ಜಿಲ್ಲೆ.
3. ಬಿ.ಟಿ. ರಾಜಣ್ಣ, ವಿಶೇಷ ಭೂಸ್ವಾಧೀನಾಧಿಕಾರಿ, ಅಪ್ಪರ್ ತುಂಗಾ ಪ್ರಾಜೆಕ್ಟ್, ಶಿವಮೊಗ್ಗ.
4. ಟಿ. ಮಲ್ಲಪ್ಪ, ವಿಶೇಷ ಭೂಸ್ವಾಧೀನಾಧಿಕಾರಿ, ಹೇಮಾವತಿ ರಿಜರ್ವಾಯರ್ ಪ್ರಾಜೆಕ್ಟ್-2, ಹಾಸನ.
5. ಎಂ. ಅಶೋಕ್, ವಿಶೇಷ ಭೂಸ್ವಾಧೀನಾಧಿಕಾರಿ, ಕೊಟ್ಟೂರು-ಹರಿಹರ ರೈಲ್ವೆ, ಬ್ರಾಡ್‌ಗೇಜ್ ಯೋಜನೆ, ಹರಪನಹಳ್ಳಿ, ದಾವಣಗೆರೆ ಜಿಲ್ಲೆ.

ತರಬೇತಿಗೆ ಹಾಜರಾಗುವ ಅಧಿಕಾರಿಗಳು ನಿಯಮಾನುಸಾರ ಪ್ರಯಾಣಭತ್ಯೆ, ದಿನಭತ್ಯೆ ಪಡೆಯಲು ಅರ್ಹರಿರುತ್ತಾರೆ.

ನಿಯೋಜಿತ ಅಧಿಕಾರಿಗಳು ದಿನಾಂಕ: 24.10.2004ರ ಅಪರಾಹ್ನ ಮೈಸೂರಿನ ಆಡಳಿತ ತರಬೇತಿ ಸಂಸ್ಥೆಯ ವಸತಿ ನಿಲಯದಲ್ಲಿ ವರದಿ ಮಾಡಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1202

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕಿನ 5 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ರಸ್ತೆಶಾಖೆ:ಎ೪-2:ಹಾಸನ:ಮೇಲ್ದರ್ಜೆ: ಗ್ರಾಮೀಣ-ಜಿ ಮು ರಸ್ತೆ: 2004-05, ದಿನಾಂಕ: 24.8.2004.

2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ: ರಸ್ತೆಶಾಖೆ: ಸ೪೦7:2004-05 ಹೊ.ನರಸೀಪುರ ಹಳ್ಳಿರಸ್ತೆ ಜಿಮುರ, ದಿನಾಂಕ: 21.9.2004.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕಿನ ಈ ಕೆಳಗಿನ 5 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

1. ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ಬಿ.ಟಿ. ರಸ್ತೆಯಿಂದ - ಪೂಜೆಕೊಪ್ಪಲು ರಸ್ತೆ (ಉದ್ದ-1.10 ಕಿ.ಮೀ.)
2. ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ತೇರಿನ ಬೀದಿಯಿಂದ-ಲಕ್ಷ್ಮೀಪುರ ಮಾರ್ಗ ಕೊಡಂಗಿಕೊಪ್ಪಲು (ಉದ್ದ 3.50 ಕಿಮೀ)
3. ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ಶ್ರೀ ರಂಗನಾಥ ಸ್ವಾಮಿ ಬೆಟ್ಟದ ರಸ್ತೆ (ಉದ್ದ 4.00 ಕಿಮೀ)
4. ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ಹಳೆಕೋಟೆ ಮಾವಿನಕೆರೆ ಕಾಮಸಮುದ್ರ ರಸ್ತೆ (ಉದ್ದ 2.80 ಕಿಮೀ)
5. ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ಬಿ.ಟಿ. ರಸ್ತೆಯಿಂದ ಆಲದಹಳ್ಳಿ ಗುಳ್ಳದಪುರ ರಸ್ತೆ (ಉದ್ದ 4.10 ಕಿಮೀ)

**ಸರ್ಕಾರಿ ಆದೇಶ ಸಂಖ್ಯೆ: ಲೋಇ 87 ಸಿಆರ್ಎಂ 2004, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2004**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ 5 ಹಳ್ಳಿ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

1. ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ಬಿ.ಟಿ. ರಸ್ತೆಯಿಂದ - ಪೂಜೆಕೊಪ್ಪಲು ರಸ್ತೆ (ಉದ್ದ-1.10 ಕಿ.ಮೀ.)
2. ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ತೇರಿನ ಬೀದಿಯಿಂದ-ಲಕ್ಷ್ಮೀಪುರ ಮಾರ್ಗ ಕೊಡಂಗಿಕೊಪ್ಪಲು (ಉದ್ದ 3.50 ಕಿಮೀ)
3. ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ಶ್ರೀ ರಂಗನಾಥ ಸ್ವಾಮಿ ಬೆಟ್ಟದ ರಸ್ತೆ (ಉದ್ದ 4.00 ಕಿಮೀ)
4. ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ಹಳೆಕೋಟೆ ಮಾವಿನಕೆರೆ ಕಾಮಸಮುದ್ರ ರಸ್ತೆ (ಉದ್ದ 2.80 ಕಿಮೀ)
5. ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ಬಿ.ಟಿ. ರಸ್ತೆಯಿಂದ ಆಲದಹಳ್ಳಿ ಗುಳ್ಳದಪುರ ರಸ್ತೆ (ಉದ್ದ 4.10 ಕಿಮೀ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1203

**ಶೇಖ್ ಅಬ್ದುಲ್ ವಾಜಿದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ).

**ಸಾರಿಗೆ ಸಚಿವಾಲಯ**

**ವಿಷಯ:** ಶ್ರೀ ಹೆಚ್. ರಘುನಾಥ್, ಪ್ರಾದೇಶಿಕ ಸಾರಿಗೆ ಅಧಿಕಾರಿ, ರಾಯಚೂರು ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಕ್ರಮಾಂಕ: ಹೆಚ್ಟಿಡಿ 99 ಟಿಎಂಇ 97, ದಿನಾಂಕ: 9.7.2002.

2. ಶ್ರೀ ಹೆಚ್. ರಘುನಾಥ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಇವರ ದಿ: 23.9.2004 ರ ಉತ್ತರ.

**ಪ್ರಸ್ತಾವನೆ:**

ಶ್ರೀ ಹೆಚ್. ರಘುನಾಥ್, ಪ್ರಾದೇಶಿಕ ಸಾರಿಗೆ ಅಧಿಕಾರಿ ರಾಯಚೂರು ಇವರು ಪ್ರಾದೇಶಿಕ ಸಾರಿಗೆ ಅಧಿಕಾರಿಯಾಗಿ ಬೆಂಗಳೂರು (ಕೇಂದ್ರ) ದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಎಸಗಿರುವ ಲೋಪದೋಷಗಳ ಆರೋಪಕ್ಕಾಗಿ ಮೇಲೆ (1) ರಲ್ಲಿ ಓದಲಾದ ದಿ: 9.7.2002 ರ ನೋಟೀಸ್‌ನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ದೋಷಾರೋಪಣೆಗಳಿಗೆ ಉತ್ತರವಾಗಿ ಶ್ರೀ ಹೆಚ್. ರಘುನಾಥ್, ಪ್ರಾದೇಶಿಕ ಸಾರಿಗೆ ಅಧಿಕಾರಿಯವರು ಮೇಲೆ (2) ರಲ್ಲಿ ಓದಲಾದ ದಿ: 23.9.2004 ರ ಪ್ರತಿವಾದದ ಲಿಖಿತ ಹೇಳಿಕೆಯಲ್ಲಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ವಿಚಾರಣೆಯನ್ನು ನಡೆಸಲು ಅತ್ಯಾವಶ್ಯಕವೆಂದು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಸಾಇ 99 ಟಿಎಂಇ 97, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಹೆಚ್. ರಘುನಾಥ್, ಪ್ರಾದೇಶಿಕ ಸಾರಿಗೆ ಅಧಿಕಾರಿ, ರಾಯಚೂರು ಇವರ ವಿರುದ್ಧ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಶ್ರೀ ಎಸ್.ವಿ. ತಿಲಗುಲ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ವಿಚಾರಣಾಧಿಕಾರಿಗಳಿಗೆ ನಿಯಮಾನುಸಾರ ಗೌರವ ಧನ ನೀಡಲಾಗುವುದು. ಹಾಗೂ ಸರ್ಕಾರದ ಆದೇಶ ಸಂ: ಸಿಆಸುಇ 45 ಸೇಇವಿ 2001, ದಿ: 4.3.2002 ರಲ್ಲಿ ನಿಗದಿಪಡಿಸಿರುವಂತೆ ಅವರು ವಾಹನ ಭತ್ಯೆ ಪಡೆಯುತ್ತಾರೆ.

2. ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಮಹಮ್ಮದ್ ದಸ್ತಗೀರ್, ಕಾನೂನು ಅಧಿಕಾರಿ, ಸಾರಿಗೆ ಆಯುಕ್ತರ ಕಛೇರಿ, ಇವರನ್ನು ಮಂಡನಾಧಿಕಾರಿಯಾಗಿ ಈ ಮೂಲಕ ನೇಮಿಸಲಾಗಿದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಒದಗಿಸುವುದು, ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಸಹಾಯವನ್ನು, ಲೇಖನ ಸಾಮಗ್ರಿಗಳನ್ನು ಒದಗಿಸಲು ಆಯುಕ್ತರು, ಸಾರಿಗೆ ಇಲಾಖೆ ಕ್ರಮ ಕೈಗೊಳ್ಳುತ್ತಾರೆ.

3. ಪ್ರಕರಣದ ತೀಕ್ಷ್ಣತೆಯನ್ನು ಗಮನಿಸಿ ವಿಚಾರಣಾಧಿಕಾರಿಗಳು ದಿನಾಂಕ: 23.11.2004 ರೊಳಗೆ ವಿಚಾರಣೆ ಮುಗಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1204 **ಜಿ.ಎನ್. ಲಕ್ಷ್ಮೀಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಸಾರಿಗೆ ಇಲಾಖೆ.

## FINANCE SECRETARIAT

**Sub:** The Karnataka Tax on Professions, Trades, Callings and Employments Act, 1976- Payment of arrears of tax due upto 31st December, 2003- Amnesty scheme-reg.

**Ref:** Govt. Order No. FD 163 CSL 2004 dated: 2.8.2004.

**Preamble:**

In the order No. FD 163 CSL 2004, dated: 2.8.2004, the Government with a view to reduce the arrears of profession tax, has introduced an Amnesty scheme. The scheme is available for all arrears of profession tax outstanding as on 31.12.2003 and the time limit is provided upto 30.9.2004. However, the requests have been made by the professionals to extend the scheme for a further period of one month. The Government after examining the scheme felt that, the extension of the scheme is necessary to reduce the arrears of profession tax considerably.

Hence the following Order.

**Government Order No. FD 256 CSL 2004, Bangalore dated: 30th September 2004**

For the reasons stated in the preamble, the Government is pleased to extend the above Amnesty scheme for a further period of one month i.e., upto 30.10.2004. The other conditions stipulated in the original Government Order remain unaltered.

By Order and in the name of Governor of Karnataka,

PR-1205 **S. Divakar**

Under Secretary to Government, Finance Department (C.T.-1).

## INFRASTRUCTURE DEVELOPMENT SECRETARIAT

**Sub:** BIAP-Release of funds for providing alternative Connectivity after closure of existing roads passing through airport site.

**Read:**
1) G.O. No. IDD 28 DIA 02, dt. 31.3.2003.
2) G.O. No. IDD 28 DIA 02, dt. 12/16.2.2004.
3) Note No. IDD 23 DIA 04 dt. 26.3.04, sent to ACS & PRS, FD, from the then ACS & PRS, IDD.

**Preamble:**

In the G.O. dated 31.3.2003 read at Sl.No. (1) above sanction was accorded for providing alternate connectivity for the existing MDR on the BIA Site near Devanahalli along the alignment recommended by KRDCL & KSIIDC by upgrading the road to MDR standards initially with provision for further upgrading to state highway standards as and when required. An amount of Rs. 2.75 crores was released to KSIIDC for getting this work done through KRDCL with stipulation for further release of the remaining cost of works only when this advance was fully utilized.

In G.O. dt. 12/16.2.2004 read at (2) above Govt. have sanctioned revised estimates of the above works including the cost of the land i.e. Rs. 632 crores as revised estimated land cost & Rs. 4.44 as estimated cost of road construction & 5% agency commission to KRDCL on the work component only for providing alternate connectivity to "BIAP due to closure of existing road passing through the Airport site. Further an amount of Rs. 1.25 crores and Rs. 7.30 crores were also released from the head of account "5465-01-190-2-05-211 BIAP alternate roads and 5465-01-190-2-02 BIAL State Support to the Project-100 Financial Assistance" respectively during the financial year 2003-04. But the amount could not be realized from SHT, Bangalore due to modified drawing procedures on token system introduced by F.D.

In this regard the ACS & PRS, IDD sent a note read at Sl.No. (3) above dt. 26.3.04 wherein it was brought to the notice of F.D. that the nodal agency for the project the KSIIDC has presented the payees receipts to the SHT to the tune of Rs. 8.55 crores therefore F.D. was requested to direct the SHT to authorize the KSIIDC to draw funds immediately. However, on account of introduction of revised procedure and issue of token system for drawal of funds on payee's receipt the bills presented by KSIIDC were not accepted by the SHT.

On account of the above now it is proposed to reallocate the expenditure to be met out of the existing allocation and also to meet out of the re-appropriation of funds from other Head of Account as below:

| | | |
|---|---|---|
| A) 1 | Total allocation required | **Rs. 855.00 lakhs** |
| ii | Budgetary allocation available in the head of account 5465-010-190-2-05 | Rs. 274.00 lakhs |
| iii | Out of re-appropriation from BIAP State Support Head 5465-01-190-2-02 (Plan) | Rs. 548.00 lakhs |
| iv | Balance amount from sanction of Supplementary estimate to be released later | Rs. 33.00 lakhs |
| | Total | Rs. 855.00 lakhs |

Hence the following order.

**Government Order No. IDD 28 DIA 2002, Bangalore, Dt. 28th October 2004**

Government are pleased to sanction to release Rs. 100.00 lakh for the time being towards BIAP providing alternate road connectivity due to closure of existing roads near Airport Site during 2004-05 under head of account "5465-01-190-2-05 (plan) and out of the allocation of Rs. 274.00 lakhs.

The remaining available amount of Rs. 174 lakhs and also the re-appropriated amount of Rs. 548 lakhs will be released after obtaining the re-appropriation sanction from the Finance Department.

The Managing Director, KSIIDC is authorized to draw the above amount of Rs. 100.00 lakhs on a payee's receipt countersigned by the Under Secretary to Government, Infrastructure Development Department.

This order is issued with the concurrence of F.D. vide their note No. 1485/Exp.I/2004, dt. 7.10.2004.

By Order and in the name of Governor of Karnataka,

PR-1207

**T.B. Renukaprasad**

Under Secretary to Government,

Infrastructure Development Department.

**ಶಿಕ್ಷಣ ಸಚಿವಾಲಯ**

**ವಿಷಯ:** ಮಧ್ಯಾಹ್ನದ ಬಿಸಿಯೂಟ ಯೋಜನೆಯಡಿ ಅಕ್ಷರ ದಾಸೋಹ ಕಾರ್ಯಕ್ರಮದ ನಿರ್ವಹಣೆಗಾಗಿ ಮಂಜೂರಾದ ಹುದ್ದೆಗಳನ್ನು 2004-05ನೇ ಸಾಲಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಆದೇಶ ಕ್ರಮಾಂಕ: ಇಡಿ 125 ಯೋಯೋಕಾ 2002, ದಿ: 23.9.2002.
2. ಆದೇಶ ಕ್ರಮಾಂಕ: ಇಡಿ 24 ಎಂಎಂಎಸ್ 2003, ದಿ: 5.6.2003.
3. ಆಯುಕ್ತರು, ಸಾರ್ವಜನಿಕ ಶಿಕ್ಷಣ ಅವರ ಪತ್ರ ಸಂಖ್ಯೆ: ಯೋ(1):ಮ.ಯೋ.ಕಾ.ಪ್ರ. 01:2004-05, ದಿ: 16.6.2004.

**ಪ್ರಸ್ತಾವನೆ:**

ರಾಜ್ಯದಲ್ಲಿನ ಶಾಲಾ ಮಕ್ಕಳಿಗೆ ಮಧ್ಯಾಹ್ನದ ಬಿಸಿಯೂಟ ಒದಗಿಸುವ ಅಕ್ಷರ ದಾಸೋಹ ಕಾರ್ಯಕ್ರಮದ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಮೇಲೆ (1) ಮತ್ತು (2) ರಲ್ಲಿ ಓದಲಾದ ದಿ: 23.9.2002 ಹಾಗೂ 5.6.2003 ರ ಸರ್ಕಾರಿ ಆದೇಶಗಳಲ್ಲಿ ಒಟ್ಟು 416 ಹುದ್ದೆಗಳನ್ನು ಸೃಷ್ಟಿಸಿ 2003-04ನೇ ಸಾಲಿನವರೆಗೆ ಮುಂದುವರಿಸಲಾಯಿತು. ಆಯುಕ್ತರು, ಪ್ರೌಢಶಾಲೆ ಶಿಕ್ಷಣ ಇಲಾಖೆ, ಬೆಂಗಳೂರು ರವರು ಮೇಲೆ (3) ರಲ್ಲಿ ಓದಲಾದ ದಿ: 16.6.2004 ರ ಪತ್ರದಲ್ಲಿ ಈ ಹುದ್ದೆಗಳನ್ನು 2004-05ನೇ ಸಾಲಿಗೆ ಮುಂದುವರಿಸುವಂತೆ ಆಯುಕ್ತರು ಕೋರಿದ್ದಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಹುದ್ದೆಗಳನ್ನು ಮುಂದುವರಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 69 ಎಂಎಂಎಸ್ 2004, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2004**

(ಇಡಿ 55 ಸ್ಪೀಮರ (ಯೂನಿಕ್) 2004, ದಿನಾಂಕ: 18.10.2004)

ಮಧ್ಯಾಹ್ನದ ಬಿಸಿ ಊಟ ಯೋಜನೆ ಅಡಿಯಲ್ಲಿ ಅಕ್ಷರ ದಾಸೋಹ ಕಾರ್ಯಕ್ರಮದ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಸೃಜಿಸಲಾದ ಈ ಕೆಳಕಂಡ ಒಟ್ಟು 416 ಹುದ್ದೆಗಳನ್ನು ಸರ್ಕಾರವು 1.4.2004 ರಿಂದ 31.3.2005 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸುತ್ತದೆ.

| | | |
|---|---|---|
| 1 | ರಾಜ್ಯ ಮಧ್ಯಾಹ್ನ ಉಪಹಾರ ಕೇಂದ್ರ ಕಾರ್ಯಾಲಯಕ್ಕೆ ವ್ಯವಸ್ಥಾಪಕರ ಹುದ್ದೆ | 01 ಹುದ್ದೆ |
| 2 | ಜಿಲ್ಲಾಧಿಕಾರಿಗಳ ಕಛೇರಿಗೆ ಹೊಂದಿಕೊಂಡಂತೆ ಗ್ರೂಪ್-ಎ ಕಿರಿಯ ಶ್ರೇಣಿಯ ಶಿಕ್ಷಣಾಧಿಕಾರಿಗಳ ಹುದ್ದೆ | 27 ಹುದ್ದೆಗಳು |
| 3 | ತಾಲ್ಲೂಕು ಕಛೇರಿಗಳಿಗೆ ಹೊಂದಿಕೊಂಡಂತೆ ಗ್ರೂಪ್-ಬಿ ಶ್ರೇಣಿಯ ಸಹಾಯಕ ನಿರ್ದೇಶಕರ ಹುದ್ದೆ | 177 ಹುದ್ದೆಗಳು |
| 4 | ಪ್ರಥಮ ದರ್ಜೆ ಸಹಾಯಕರ ಹುದ್ದೆ | 211 ಹುದ್ದೆಗಳು |
| | ಒಟ್ಟು | 416 ಹುದ್ದೆಗಳು |

ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅ.ಟಿ. ಸಂಖ್ಯೆ: ಇಡಿ 426 ಐಎಫ್ (ಬಿಎ) 2004, ದಿ: 01.9.2004 ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1208

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

**ವಿಷಯ:** ಶ್ರೀ ಕೆ. ಶ್ರೀಕಂಠೇಶ್ವರ್, ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ) ಅವರಿಗೆ ಎರಡನೆಯ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಶ್ರೀ ಶ್ರೀಕಂಠೇಶ್ವರ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಶಿಕ್ಷಣ ಇಲಾಖೆ (ಯೋಜನೆ) ಅವರ ದಿನಾಂಕ: 19.5.2004ರ ಮನವಿ.
2. ದಿನಾಂಕ: 10.7.2004ರ ಸರ್ಕಾರದ ಆದೇಶ ಸಂಖ್ಯೆ: ಇಡಿ 95 ಡಿಎಆರ್ 2004.
3. ಮಹಾಲೇಖಪಾಲರು, (ಎ ಮತ್ತು ಇ) ಕರ್ನಾಟಕ ಬೆಂಗಳೂರು ಇವರ ಸಂಖ್ಯೆ: ಜಿಇ:4:ಇ2ಎನ್26:426 ದಿನಾಂಕ: 8.9.2004.

**ಪ್ರಸ್ತಾವನೆ:**

ಶ್ರೀ ಶ್ರೀಕಂಠೇಶ್ವರ್, ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ) ಇವರು ಮೇಲೆ (1) ರಲ್ಲಿ ಓದಲಾದ ದಿನಾಂಕ: 19.5.2004ರ ಮನವಿಯಲ್ಲಿ ದಿನಾಂಕ: 1.1.2003 ಕ್ಕೆ ಗರಿಷ್ಠ ವೇತನ ಶ್ರೇಣಿ ತಲುಪಿದ್ದು, ದಿನಾಂಕ: 1.1.2004 ರಿಂದ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿದ್ದರು.

ಮೇಲೆ ಓದಲಾಗಿರುವ (2)ರ ದಿನಾಂಕ: 10.7.2004 ರ ಆದೇಶದಲ್ಲಿ ಮೊದಲನೆ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (3)ರ ದಿನಾಂಕ: 8.9.2004ರ ಪತ್ರದಲ್ಲಿ ಮಹಾಲೇಖಪಾಲರು ಕರ್ನಾಟಕ ಬೆಂಗಳೂರು ಇವರು ಸದರಿಯವರಿಗೆ ರೂ. 3300-6,300ರ ವೇತನ ಶ್ರೇಣಿಯಲ್ಲಿ ದಿನಾಂಕ: 1.1.1999 ರಿಂದ ಜಾರಿಗೆ ಬರುವಂತೆ ಮೊದಲನೆಯ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡಿರುವುದಾಗಿ ತಿಳಿಸುವ ಮೂಲಕ 2ನೇ ಸ್ಥಗಿತ ವೇತನಕ್ಕೆ ದಿನಾಂಕ: 1.1.2004 ರಿಂದ ಅರ್ಹತೆ ಹೊಂದಿರುವುದಾಗಿ ತಿಳಿಸಿರುತ್ತಾರೆ.

ಅಂತೆಯೇ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 95 ಡಿಎಆರ್ 2004, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2004**

1) ಮೇಲ್ಕಂಡ ಸಂದರ್ಭಗಳಲ್ಲಿ ಮೇಲೆ (2) ರಲ್ಲಿ ಓದಲಾಗಿರುವ ದಿನಾಂಕ: 10.7.2004 ರ ಸರ್ಕಾರದ ಆದೇಶವನ್ನು ಈ ಮೂಲಕ ರದ್ದುಗೊಳಿಸಿದೆ.

2) ಶ್ರೀ ಕೆ. ಶ್ರೀಕಂಠೇಶ್ವರ್, ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ) ಇವರಿಗೆ 10,620-14,960ರ ವೇತನ ಶ್ರೇಣಿಯಲ್ಲಿ ದಿನಾಂಕ: 1.1.2004 ರಿಂದ ಜಾರಿಗೆ ಬರುವಂತೆ ಎರಡನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿದೆ.

3) ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1209

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು)

**ವಿಷಯ:** ಶ್ರೀಮತಿ ಎಸ್.ಎನ್. ಜ್ಯೋತಿ, ಆಂಗ್ಲಭಾಷಾ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ವಿಧಿಸಿರುವ ದಂಡನೆಯನ್ನು ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ-76-ಡಿಸಿಇ-99, ದಿನಾಂಕ: 19.3.2003.
2. ಶ್ರೀಮತಿ ಎಸ್.ಎನ್. ಜ್ಯೋತಿ ಅವರು ಗೌರವಾನ್ವಿತ ರಾಜ್ಯಪಾಲರಿಗೆ ಸಲ್ಲಿಸಿದ ಅಪೀಲು ಮನವಿ ದಿನಾಂಕ: 23.9.2003.

**ಪ್ರಸ್ತಾವನೆ:**

ಶ್ರೀಮತಿ ಎಸ್.ಎನ್. ಜ್ಯೋತಿ, ಆಂಗ್ಲಭಾಷಾ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರು ಈ ಕೆಳಕಂಡ ಅವಧಿಗಳಲ್ಲಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದರ ಹಿನ್ನಲೆಯಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲಾಗಿತ್ತು. ವಿಚಾರಣೆಯಲ್ಲಿ ಆರೋಪಿತರ ವಿರುದ್ಧದ ಆರೋಪಗಳು ರುಜುವಾತಾಗಿರುತ್ತದೆಂದು ವರದಿ ಮಾಡಿದ್ದರಿಂದ, ವಿಚಾರಣಾ ವರದಿಯನ್ವಯ ಹಾಗೂ ಸಚಿವ ಸಂಪುಟದ ತೀರ್ಮಾನದಂತೆ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 8(viii) ರಡಿಯಲ್ಲಿ ಸೇವೆಯಿಂದ ವಜಾಗೊಳಿಸುವ ಕಠಿಣ ದಂಡನೆಯನ್ನು ಸದರಿ ಉಪನ್ಯಾಸಕರಿಗೆ ವಿಧಿಸಿ ಮೇಲೆ ಓದಲಾದ (1)ರ ದಿನಾಂಕ: 19.3.2003 ರಲ್ಲಿ ಆದೇಶವನ್ನು ಹೊರಡಿಸಲಾಗಿತ್ತು.

| | | |
|---|---|---|
| ದಿನಾಂಕ: 12.10.93 ರಿಂದ 16.06.96 | 2 ವರ್ಷ 8 ತಿಂಗಳು | 04 ದಿನ |
| ದಿನಾಂಕ: 01.09.97 ರಿಂದ 05.10.97 | 2 ತಿಂಗಳು | 04 ದಿನ |
| ದಿನಾಂಕ: 07.10.97 ರಿಂದ 24.10.97 | | 18 ದಿನ |
| ದಿನಾಂಕ: 26.10.97 ರಿಂದ 31.10.97 | | 05 ದಿನ |
| ದಿನಾಂಕ: 02.12.97 ರಿಂದ 07.04.99 | 1 ವರ್ಷ 4 ತಿಂಗಳು | 01 ದಿನ |
| ಒಟ್ಟು | 4 ವರ್ಷ 2 ತಿಂಗಳು | 02 ದಿನಗಳು |

ಈ ಆದೇಶದಿಂದ ಭಾದಿತರಾದ ಶ್ರೀಮತಿ ಎಸ್.ಎನ್. ಜ್ಯೋತಿ ಅವರು ಮೇಲೆ ಓದಲಾದ (2)ರ ದಿನಾಂಕ: 23.09.2003 ರಲ್ಲಿ ಗೌರವಾನ್ವಿತ ರಾಜ್ಯಪಾಲರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮ 18ರಡಿ ಅಪೀಲನ್ನು ಸಲ್ಲಿಸಿ ಅವರನ್ನು ಸೇವೆಗೆ ಪುನರ್ ನೇಮಕ ಮಾಡುವಂತೆ ಕೋರಿರುತ್ತಾರೆ.

ಗೌರವಾನ್ವಿತ ರಾಜ್ಯಪಾಲರು ಶ್ರೀಮತಿ ಎಸ್.ಎನ್. ಜ್ಯೋತಿ ಅವರಿಗೆ ನೀಡಲಾಗಿದ್ದ ಶಿಕ್ಷೆಯನ್ನು ಮಾರ್ಪಡಿಸಿ ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

"To meet the ends of justice, it would be appropriate to modify the order of imposing penalty of dismissal to that of reduction to a lower stage in the time scale of pay applicable to the appellant, for a specified period, as contemplated in clause - (IV-a) of Rule 8 of KCS (CCA) Rules, 1957.

I therefore modify the penalty of dismissal to that of reduction to a lower stage in the time scale of pay. Accordingly, the pay of the appellant shall be reduced to the minimum of the time scale of pay applicable to the appellant for a period of five years and she would not earn any increment in those 5 years and also that this reduction in pay shall have the effect of postponing the future increments of her pay. During this period of five years, the appellant shall not be entitled for promotion. The entire period of unauthorised absence shall be regulated under 106-A of KCSRs."

ಅದರಂತೆ ಸರ್ಕಾರವು ಶ್ರೀಮತಿ ಎಸ್.ಎನ್. ಜ್ಯೋತಿ, ಆಂಗ್ಲಭಾಷಾ ಉಪನ್ಯಾಸಕರು ಇವರನ್ನು ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಿರುವುದನ್ನು ಮಾರ್ಪಡಿಸಿ ಈ ಕೆಳಕಂಡಂತೆ ಆದೇಶಿಸಲು ನಿರ್ಣಯಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ-76-ಡಿಸಿಇ-99, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನಲೆಯಲ್ಲಿ ಶ್ರೀಮತಿ ಎಸ್.ಎನ್. ಜ್ಯೋತಿ, ಆಂಗ್ಲಭಾಷಾ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರಿಗೆ ಸರ್ಕಾರಿ ಆದೇಶ ಸಂಖ್ಯೆ: ಇಡಿ 76 ಡಿಸಿಇ 99 ದಿನಾಂಕ: 19.3.2003 ರಲ್ಲಿ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಿರುವುದನ್ನು ಮಾರ್ಪಡಿಸಿ ಅವರ ವೇತನವನ್ನು ಉಪನ್ಯಾಸಕರ ವೇತನ ಶ್ರೇಣಿ ರೂ. 8,000-275-13,500 ರಲ್ಲಿ ಕೆಳಹಂತವಾದ ರೂ. 8,000/- ಕ್ಕೆ 5 ವರ್ಷಗಳವರೆಗೆ ಕೆಳಗಿಳಿಸಲು ಹಾಗೂ ಸದರಿ 5 ವರ್ಷಗಳ ಅವಧಿಯಲ್ಲಿ ಅವರು ಯಾವುದೇ ವೇತನ ಬಡ್ತಿಯನ್ನು ಪಡೆಯುವಂತಿಲ್ಲ. ಹಾಗೂ ಮುಂಬಡ್ತಿಯನ್ನು ಹೊಂದಲು ಅನರ್ಹತೆಗೊಳಿಸಿ ಈ ವೇತನ ಕೆಳಗಿಳಿಸುವಿಕೆಯು ಅವರ ಮುಂದಿನ ವೇತನ ಬಡ್ತಿಗಳು ಮುಂದೂಡಲ್ಪಡುವ ಪರಿಣಾಮ ಉಂಟು ಮಾಡತಕ್ಕದ್ದೆಂದು ಆದೇಶಿಸಲಾಗಿದೆ.

ಈ ಕೆಳಕಂಡ ಅವರ ಗೈರುಹಾಜರಿ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 106-ಎ ರಡಿಯಲ್ಲಿ ವೇತನರಹಿತ ರಜೆಯೆಂದು ಸಕ್ರಮಗೊಳಿಸಿ ಆದೇಶಿಸಲಾಗಿದೆ.

| | | |
|---|---|---|
| ದಿನಾಂಕ: 12.10.93 ರಿಂದ 16.06.96 | 2 ವರ್ಷ 8 ತಿಂಗಳು | 04 ದಿನ |
| ದಿನಾಂಕ: 01.09.97 ರಿಂದ 05.10.97 | 2 ತಿಂಗಳು | 04 ದಿನ |
| ದಿನಾಂಕ: 07.10.97 ರಿಂದ 24.10.97 | | 18 ದಿನ |
| ದಿನಾಂಕ: 26.10.97 ರಿಂದ 31.10.97 | | 05 ದಿನ |
| ದಿನಾಂಕ: 02.12.97 ರಿಂದ 07.04.99 | 1 ವರ್ಷ 4 ತಿಂಗಳು | 01 ದಿನ |
| ಒಟ್ಟು | 4 ವರ್ಷ 2 ತಿಂಗಳು | 02 ದಿನಗಳು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1210

**ಮೇರಿ ಜಾಯ್ಸ್**

ಸರ್ಕಾರದ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ)

## ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವಾಲಯ

**ವಿಷಯ:–** 2004–05ನೇ ಸಾಲಿನ ಜೂನ್ ಮತ್ತು ಜುಲೈ ಆಗಸ್ಟ್ ಹಾಗೂ ಸೆಪ್ಟೆಂಬರ್ ತಿಂಗಳುಗಳಿಗೆ ಗ್ರಾಮ ಪಂಚಾಯತಿಗಳಿಗೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:–** 1) ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 232 ಗ್ರಾಪಂಅ 2004,ದಿ.10–6–04.

2) ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 8 ಜಿಪಅ 2004 (ಭಾಗ–2), ದಿನಾಂಕ:2–7–2004 ಹಾಗೂ 27–7–2004 ಮತ್ತು 7–9–04.

3) ಸುತ್ತೋಲೆ ಸಂಖ್ಯೆ:ಗ್ರಾಅಪ 1 ಕೆಪಿಟಿಸಿಎಲ್ 2004 ದಿ:25–10–04.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶ(1)ರಲ್ಲಿ 2004–05ನೇ ಸಾಲಿನ ಏಪ್ರಿಲ್, ಮೇ ಎರಡು ತಿಂಗಳುಗಳಿಗೆ **ರೂ.4710.00** ಲಕ್ಷದ ಅನುದಾನವನ್ನು ಪ್ರತಿ ಗ್ರಾಮ ಪಂಚಾಯತಿಗೆ ರೂ.83,000–00ರಂತೆ ಹಂಚಿಕೆ ಮಾಡಿ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ ಓದಲಾದ ಉಲ್ಲೇಖ (2)ರಲ್ಲಿನ ಅನಧಿಕೃತ ಟಿಪ್ಪಣಿಗಳಲ್ಲಿ ಆರ್ಥಿಕ ಇಲಾಖೆಯು ಕೆಳಕಂಡಂತೆ ಗ್ರಾಮ ಪಂಚಾಯತಿಗಳಿಗೆ ಅನುದಾನ ಬಿಡುಗಡೆ ಮಾಡಲಾಗಿದ್ದು, ಆಯಾಯಾ ಗ್ರಾಮಪಂಚಾಯತಿಗಳ ಬ್ಯಾಂಕ್ ಖಾತೆಗೆ ಜಮೆ ಮಾಡಲು ತಿಳಿಸಿದೆ.

| ಕ್ರಮ ಸಂಖ್ಯೆ | ಅನಧಿಕೃತ ಟಿಪ್ಪಣಿಸಂಖ್ಯೆ | ಅನುದಾನ ಬಿಡುಗಡೆಯಾಗಿರುವ ತಿಂಗಳು | ಅನುದಾನದ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|
| 1 | ಆಇ 8 ಜಿಪಅ 2004. ದಿ:2–7–04 | ಜೂನ್ 2004 | 2355.00 |
| 2 | ಆಇ 8 ಜಿಪಅ 2004. ದಿ:27–7–04 | ಜುಲೈ 2004 | 2355.00 |
| 3 | ಆಇ 8 ಜಿಪಅ 2004. ದಿ:7–9–04 | ಆಗಸ್ಟ್ ಮತ್ತು ಸೆಪ್ಟೆಂಬರ್ 2004 | 4710.00 |

ಸರ್ಕಾರದ ಹಂತದಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 316 ಗ್ರಾಪಂಅ 2004, ದಿನಾಂಕ: 27ನೇ ಅಕ್ಟೋಬರ್ 2004**

ರಾಜ್ಯದ ಗ್ರಾಮ ಪಂಚಾಯತಿಗಳಿಗೆ 2004–05ನೇ ಸಾಲಿನ ಜೂನ್, ಜುಲೈ, ಆಗಸ್ಟ್, ಮತ್ತು ಸೆಪ್ಟೆಂಬರ್ ತಿಂಗಳುಗಳ ಅನುದಾನದ ಬಾಬ್ತು **ರೂ.9420.00** ಲಕ್ಷ (ರೂ.ಒಂಭತ್ತು ಸಾವಿರದ ನಾನೂರ ಇಪ್ಪತ್ತು ಲಕ್ಷ ರೂಗಳು ಮಾತ್ರ)ಗಳನ್ನು ಲೆಕ್ಕ ಶೀರ್ಷಿಕೆ **"2515–00–198–1–07 (ಯೋಜನೆ)"** ಯಡಿಯಿಂದ ಬಿಡುಗಡೆ ಮಾಡಲು ಹಾಗೂ ಈ ಅನುದಾನದ ಮೊತ್ತವನ್ನು ರಾಜ್ಯ ಹುಜೂರ್ ಖಜಾನೆಯಿಂದ ಪೇಯೀಸ್ ರಸೀತಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ರಾಜದೂತ್ ಕಾಂಪ್ಲೆಕ್ಸ್, ಒಂದನೇ ಮಹಡಿ, ಮೈಸೂರು ಬ್ಯಾಂಕ್ ವೃತ್ತ, ಬೆಂಗಳೂರು ಇಲ್ಲಿ ತೆರೆದಿರುವ ಖಾತೆಯ ಮುಖಾಂತರ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಸಮನಾಗಿ ಲಭ್ಯವಾಗುವ ಮೊತ್ತ ಜೂನ್, ಜುಲೈ, ಆಗಸ್ಟ್ ಮತ್ತು ಸೆಪ್ಟೆಂಬರ್ ಮಾಹೆಗೆ ರೂ.1,66,000/–(ಒಂದು ಲಕ್ಷದ ಅರವತ್ತಾರು ಸಾವಿರ ರೂಪಾಯಿಗಳು ಮಾತ್ರ) ಗ್ರಾಮ ಪಂಚಾಯ್ತಿಗಳ ಸ್ಥಳೀಯ ಬ್ಯಾಂಕ್ ಖಾತೆಗೆ ಜಮೆ ಮಾಡಲು ಆದೇಶಿಸಲಾಗಿದೆ.

ಹೀಗೆ ಜಮಾ ಮಾಡುವ ಮುನ್ನ ಸಂಬಂಧಿಸಿದ ಗ್ರಾಮಪಂಚಾಯತಿಗಳು ಅವುಗಳ ದಿ:1–4–2004ರಿಂದ ಪಾವತಿಸಬೇಕಾದ ವಿದ್ಯುಚ್ಛಕ್ತಿ ಬಿಲ್ಲನ್ನು ಪಾವತಿಸಿರುವ ಬಗ್ಗೆ ಖಚಿತಪಡಿಸಿಕೊಳ್ಳಬೇಕಾಗಿರುತ್ತದೆ. ಮೇಲೆ ಓದಲಾದ (3)ರ ಸುತ್ತೋಲೆಯಲ್ಲಿ ಸರ್ಕಾರ ನಿಗಧಿಪಡಿಸಿದಂತೆ ಗ್ರಾಮಪಂಚಾಯತಿಗಳು ವಿದ್ಯುಚ್ಛಕ್ತಿ ಬಿಲ್ಲನ್ನು ಪಾವತಿಸಿಲ್ಲದಿದ್ದಲ್ಲಿ, ಗ್ರಾಮಪಂಚಾಯತಿಗಳಿಗೆ ಈಗ ಬಿಡುಗಡೆ ಮಾಡಬೇಕಾದ ಹಣದಿಂದ ಸಂಬಂಧಿಸಿದ ಎಸ್ಕಾಂ ಗಳಿಗೆ ಹಣವನ್ನು ಬಿಡುಗಡೆ ಮಾಡಿ ಉಳಿದ ಹಣವನ್ನು ಸಂಬಂಧಿಸಿದ ಗ್ರಾಮಪಂಚಾಯತಿಗಳಿಗೆ ಬಿಡುಗಡೆ ಮಾಡುವಂತೆ ಆದೇಶಿಸಲಾಗಿದೆ.

ಈ ರೀತಿ ಬಿಡುಗಡೆಯಾದ ಹಣವನ್ನು ಗ್ರಾಮಪಂಚಾಯತಿಗಳು ಉದ್ದೇಶಿತ ಕಾರ್ಯಕ್ರಮಗಳಿಗೆ ತಾವು ತಯಾರಿಸಿದ ಅಯವ್ಯಯದ ಆಧಾರದ ಮೇಲೆ ವೆಚ್ಚ ಮಾಡಲು ಆದೇಶಿಸಲಾಗಿದೆ.

ರಾಜ್ಯದ ಎಲ್ಲಾ 27 ಜಿಲ್ಲಾ ಪಂಚಾಯತಿಗಳಿಗೆ ಹಣವನ್ನು ಇದಕ್ಕೆ ಲಗತ್ತಿಸಿದ ಅನುಬಂಧದ ರೀತ್ಯಾ ಹಂಚಿಕೆ ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ:ಆಇ 8 ಜಿಪಅ 2004(ಭಾಗ 2) ದಿನಾಂಕ:2–7–04, 27–7–2004 ಹಾಗೂ 7–9–2004ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಸ್.ಶಾಮಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ಅನುಬಂಧ**

| ಕ್ರಮ ಸಂಖ್ಯೆ | ಉಪ ಲೆಕ್ಕ ಶೀರ್ಷಿಕೆ | ಜಿಲ್ಲಾ ಪಂಚಾಯತಿ ಹೆಸರು | ಗ್ರಾಮ ಪಂಚಾಯತಿಗಳ ಸಂಖ್ಯೆ | ಜೂನ್, ಜುಲೈ, ಆಗಸ್ಟ್, ಸೆಪ್ಟೆಂಬರ್ ತಿಂಗಳ ಒಟ್ಟು ಅನುದಾನದ ಮೊತ್ತ |
|---|---|---|---|---|
| 1 | 2 | 3 | 4 | 5 |
| 1 | 401 | ಬೆಂಗಳೂರು(ನ) | 110 | 1,82,60,000 |
| 2 | 402 | ಬೆಂಗಳೂರು(ಗ್ರಾ) | 228 | 3,78,48,000 |
| 3 | 461 | ಬಾಗಲಕೋಟೆ | 163 | 2,70,58,000 |
| 4 | 413 | ಬೆಳಗಾಂ | 485 | 8,05,10,000 |
| 5 | 418 | ಬಳ್ಳಾರಿ | 189 | 3,13,74,000 |
| 6 | 419 | ಬೀದರ್ | 175 | 2,90,50,000 |
| 7 | 414 | ಬಿಜಾಪುರ | 199 | 3,30,34,000 |
| 8 | 408 | ಚಿಕ್ಕಮಗಳೂರು | 226 | 3,75,16,000 |
| 9 | 403 | ಚಿತ್ರದುರ್ಗ | 185 | 3,07,10,000 |
| 10 | 456 | ಚಾಮರಾಜನಗರ | 120 | 1,99,20,000 |
| 11 | 409 | ದಕ್ಷಿಣಕನ್ನಡ | 203 | 3,36,98,000 |
| 12 | 451 | ದಾವಣಗೆರೆ | 230 | 3,81,80,000 |
| 13 | 415 | ಧಾರವಾಡ | 127 | 2,10,82,000 |
| 14 | 462 | ಗದಗ | 106 | 1,75,96,000 |
| 15 | 417 | ಗುಲ್ಬರ್ಗ | 337 | 5,59,42,000 |
| 16 | 410 | ಹಾಸನ | 258 | 4,28,28,000 |
| 17 | 463 | ಹಾವೇರಿ | 206 | 3,41,96,000 |
| 18 | 411 | ಕೊಡಗು | 98 | 1,62,68,000 |
| 19 | 404 | ಕೋಲಾರ | 307 | 5,09,62,000 |
| 20 | 466 | ಕೊಪ್ಪಳ | 134 | 2,22,44,000 |
| 21 | 412 | ಮಂಡ್ಯ | 232 | 3,85,12,000 |
| 22 | 407 | ಮೈಸೂರು | 235 | 3,90,10,000 |
| 23 | 420 | ರಾಯಚೂರು | 164 | 2,72,24,000 |
| 24 | 405 | ಶಿವಮೊಗ್ಗ | 260 | 4,31,60,000 |
| 25 | 406 | ತುಮಕೂರು | 321 | 5,32,86,000 |
| 26 | 416 | ಉತ್ತರಕನ್ನಡ | 207 | 3,43,62,000 |
| 27 | 457 | ಉಡುಪಿ | 146 | 2,42,36,000 |
| | | ಒಟ್ಟು | 5651 | 93,80,66,000 |

**ಕೆ.ಎಸ್.ಶಾಮಸುಂದರ**

ಪಿ.ಆರ್. 1212

ಸರ್ಕಾರದ ಅಧೀನ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ವಸತಿ ಸಚಿವಾಲಯ

## ತಿದ್ದುಪಡಿ

### ಸಂಖ್ಯೆ: ವಇ 211 ಯುಹೆಚ್ಎಸ್ 2001, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2004

ಸರ್ಕಾರದ ಅಧಿಸೂಚನೆ ಸಂಖ್ಯೆ: ವಇ 211 ಯುಹೆಚ್ಎಸ್ 2001, ದಿನಾಂಕ: 28.9.2002 ರಲ್ಲಿ ಕಂಡಿಕೆ 3 ರಲ್ಲಿ ಪ್ರಕಟವಾದ "ಕಾರ್ಯದರ್ಶಿ" ಎಂಬ ಪದಕ್ಕೆ ಬದಲಾಗಿ ಈ ಕೆಳಗಿನಂತೆ ಓದಿಕೊಳ್ಳತಕ್ಕದ್ದು.

| | | |
|---|---|---|
| 1 | ಆಡಳಿತ ವಿಷಯಗಳು | ಕಾರ್ಯದರ್ಶಿಗಳು |
| 2 | ತಾಂತ್ರಿಕ ವಿಷಯಗಳು (ಯೋಜನೆ ನಿರೂಪಣೆ) | ಮುಖ್ಯ ಇಂಜಿನಿಯರ್ |
| 3 | ಹಣಕಾಸು ವಿಷಯಗಳು | ಪ್ರಧಾನ ವ್ಯವಸ್ಥಾಪಕರು (ಹಣಕಾಸು) |

| | | |
|---|---|---|
| 4 | ವಸೂಲಿ ವಿಷಯಗಳು | ಪ್ರಧಾನ ವ್ಯವಸ್ಥಾಪಕರು (ವಸೂಲಿ) |
| 5 | ಹಂಚಿಕೆ ವಿಷಯಗಳು | ಪ್ರಧಾನ ವ್ಯವಸ್ಥಾಪಕರು (ಗ್ರಾಹಕ ಸೇವೆ) |
| 6 | ಭೂ ಸ್ವಾಧೀನ ವಿಷಯಗಳು | ಉಪ ಪ್ರಧಾನ ವ್ಯವಸ್ಥಾಪಕರು (ಭೂ ಸ್ವಾಧೀನ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1213

**ಹೆಚ್. ಹನುಮಂತಯ್ಯ**

ಪೀಠಾಧಿಕಾರಿ-1, ವಸತಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

### ತಿದ್ದುಪಡಿ ಆದೇಶ

### ಸಂ: ಸಂಕಇ 21 ಕಪ್ರಧ 2004, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2004

**ವಿಷಯ:** ಕನ್ನಡ ಭವನದ ಚಾಲುಕ್ಯ ವಿಭಾಗದ ಕಟ್ಟಡ ಕಾಮಗಾರಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರಿ ಆದೇಶ ಸಂ. ಸಂಕಇ 21 ಕಪ್ರಧ 2004, ದಿನಾಂಕ: 4.9.2004.

ಉಲ್ಲೇಖದಲ್ಲಿ ಹೇಳಿರುವ ಸರ್ಕಾರಿ ಆದೇಶದಲ್ಲಿ ಲೆಕ್ಕ ಶೀರ್ಷಿಕೆ '4202-04-800-1-011 ಜಿಲ್ಲಾ ರಂಗಮಂದಿರ ನಿರ್ಮಾಣ ಹಾಗೂ ಕನ್ನಡ ಭವನ ನಿರ್ಮಾಣ ನಿರ್ವಹಣೆ ಯೋಜನೆ ಎಂದು ತಪ್ಪಾಗಿ ನಮೂದಾಗಿದ್ದು, ಇದನ್ನು ಲೆಕ್ಕ ಶೀರ್ಷಿಕೆ 4202-04-800-1-01 ಜಿಲ್ಲಾ ರಂಗಮಂದಿರ ನಿರ್ಮಾಣ ಹಾಗೂ ಕನ್ನಡ ಭವನ ನಿರ್ಮಾಣ ನಿರ್ವಹಣೆ ಯೋಜನೆ" ಎಂದು ಓದುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1214

**ಎನ್.ಎಲ್. ಹೊಟಕರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಕನ್ನಡ ಭವನ ಚಾಲುಕ್ಯ ವಿಭಾಗದ ಕಟ್ಟಡ ನಿರ್ಮಾಣಕ್ಕಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ: ಸಂಕಇ 21 ಕಪ್ರಧ 2004, ದಿನಾಂಕ: 2.6.2004.

2) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂ: ಕಸನಿ:ಕಭ:11:2004-05, ದಿನಾಂಕ: 11.8.2004.

ಪ್ರಸ್ತಾವನೆ:

ಮೇಲೆ ಓದಲಾದ ಆದೇಶದಲ್ಲಿ ಪ್ರಸಕ್ತ ಸಾಲಿನಲ್ಲಿ ಕನ್ನಡ ಭವನದ ಚಾಲುಕ್ಯ ವಿಭಾಗದ ಕಟ್ಟಡ ನಿರ್ಮಾಣಕ್ಕೆ ರೂ. 23.00 ಲಕ್ಷಗಳನ್ನು ಆಯವ್ಯಯದಲ್ಲಿ ಅವಕಾಶ ಮಾಡಿದ್ದು, ಇದರಲ್ಲಿ ರೂ. 7.66 ಲಕ್ಷಗಳನ್ನು ಅನುದಾನವಾಗಿ ಬಿಡುಗಡೆಗೊಳಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ, ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ರವರು ಪ್ರಸ್ತಾವನೆಯನ್ನು ಕಳುಹಿಸಿ ಈ ಸಾಲಿನ ಉಳಿದ ಮೊತ್ತ ರೂ. 12.34 ಲಕ್ಷಗಳನ್ನು ಕಾರ್ಯಪಾಲಕ ಇಂಜಿನಿಯರ್, ಸಂ. 2 ಕಟ್ಟಡಗಳ ವಿಭಾಗ, ಲೋಕೋಪಯೋಗಿ ಇಲಾಖೆ, ಬೆಂಗಳೂರು ರವರಿಗೆ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ನೀಡಿದೆ.

### ಸರ್ಕಾರಿ ಆದೇಶ ಸಂ: ಸಂಕಇ 21 ಕಪ್ರಧ 2004, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2004

ಕನ್ನಡ ಭವನದ ಚಾಲುಕ್ಯ ವಿಭಾಗದ ಕಟ್ಟಡ ನಿರ್ಮಾಣಕ್ಕಾಗಿ ಇನ್ನುಳಿದ ರೂ. 12.34 ಲಕ್ಷಗಳಲ್ಲಿ ರೂ. 6.17 ಲಕ್ಷ (ಆರು ಲಕ್ಷ ಹದಿನೇಳು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು ಇವರ ಮುಖಾಂತರ ಕಾರ್ಯನಿರ್ವಾಹಕ ಇಂಜಿನಿಯರ್, ನಂ. 2, ಕಟ್ಟಡಗಳ ವಿಭಾಗ, ಲೋಕೋಪಯೋಗಿ ಇಲಾಖೆ, ಬೆಂಗಳೂರು ರವರಿಗೆ ಬಿಡುಗಡೆ ಮಾಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "4202-04-800-1-01-139 ಜಿಲ್ಲಾ ರಂಗಮಂದಿರ ನಿರ್ಮಾಣ, ಕನ್ನಡ ಭವನ ನಿರ್ಮಾಣ ನಿರ್ವಹಣೆ (ಯೋಜನೆ)" ಯಡಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಮುಂದುವರೆದ ಯೋಜನೆಯಡಿ ಹೊರಡಿಸಲಾದ ಆದೇಶ ಸಂ: ಸಂಕಇ 42 ಸ್ಕೀಮರ 2004, ದಿ: 15.5.2004 ರ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1215

**ಎನ್.ಎಲ್. ಹೊಟಕರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಕಾನೂನು ಸಚಿವಾಲಯ

**ವಿಷಯ:** ಶ್ರೀ ಸಿ. ಬಸವರಾಜು, ವಕೀಲರು, ಹೊಸದುರ್ಗ ಇವರನ್ನು ಶ್ರೀ ಮುನಿರತ್ನಂ ನಾಯ್ಡು, ನೋಟರಿ, ಹೊಸದುರ್ಗ ಇವರ ನಿಧನದಿಂದ ತೆರವಾದ ನೋಟರಿ ಹುದ್ದೆಗೆ ನೇಮಕಾತಿ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಪತ್ರ ಸಂಖ್ಯೆ: ಲಾ 45 ಎಲ್‌ಸಿಎಲ್ 03, ದಿನಾಂಕ: 27.8.2003.

2) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗರವರ ಪತ್ರ ಸಂಖ್ಯೆ: 2299:2004 ದಿನಾಂಕ: 27.2.2004.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1) ರಲ್ಲಿ ಓದಲಾಗಿರುವ ದಿನಾಂಕ: 27.8.2003 ರ ಸರ್ಕಾರಿ ಪತ್ರದಲ್ಲಿ ಶ್ರೀ ಮುನಿರತ್ನಂ ನಾಯ್ಡು, ನೋಟರಿ, ಹೊಸದುರ್ಗ ಇವರ ನಿಧನದಿಂದ ತೆರವಾದ ನೋಟರಿ ಹುದ್ದೆಗೆ ನೇಮಕ ಮಾಡಲು ಸೂಕ್ತ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಇವರನ್ನು ಕೋರಿ, ದಿನಾಂಕ: 27.11.03 ಹಾಗೂ ದಿನಾಂಕ: 3.2.2004 ರಂದು ಪ್ರಸ್ತಾವನೆ ಕುರಿತಂತೆ ನೆನಪೋಲೆಗಳನ್ನು ಕಳುಹಿಸಲಾಗಿತ್ತು.

ಮೇಲೆ ಕ್ರಮಾಂಕ (2) ರಲ್ಲಿ ಓದಲಾಗಿರುವ ದಿನಾಂಕ: 27.2.2004 ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ, ಇವರು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿ ನಿಗದಿತ ನಮೂನೆಯಲ್ಲಿ ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 45 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 2ನೇ ನವೆಂಬರ್ 2004**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಸಿ. ಬಸವರಾಜು, ವಕೀಲರು, ಪ್ರಕೃತಿ ಸದನ, 1ನೇ ಮೈನ್, 2ನೇ ಕ್ರಾಸ್, ವಿದ್ಯಾನಗರ, ಹೊಸದುರ್ಗ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಶ್ರೀ ಮುನಿರತ್ನಂ ನಾಯ್ಡು, ನೋಟರಿ, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ ಇವರ ನಿಧನದಿಂದ ತೆರವಾದ ನೋಟರಿ ಹುದ್ದೆಗೆ, ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ. 1000.00 (ರೂಪಾಯಿ ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1217

**ಬಿ.ಎಸ್. ಈಶ್ವರ ಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ, ಆಡಳಿತ-1.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಹಿರಿಯ ಅಂಗವಿಕಲರ ನೀತಿ ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರದಿಂದ ಹಗಲು ಯೋಗ ಕ್ಷೇಮ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಮಮಇ 314 ಎಸ್‌ಜೆಡಿ 2003, ದಿನಾಂಕ: 5.9.2003.
2) ನಿರ್ದೇಶಕರು, ಅಂಗವಿಕಲರ ಹಾಗೂ ಹಿರಿಯ ನಾಗರೀಕರ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂ: ನಿಅಕಇ/ಯೋಜನೆ/24/2003-2004, ದಿ: 26.3.2004.

**ಪ್ರಸ್ತಾವನೆ:**

ಹಿರಿಯ ನಾಗರೀಕರ ಕಲ್ಯಾಣಕ್ಕಾಗಿ ಸಂಯೋಜನಾ ಮಂತ್ರಾಲಯವಾಗಿರುವ ಕೇಂದ್ರ ಸಾಮಾಜಿಕ ನ್ಯಾಯ ಮತ್ತು ಅಧಿಕಾರಯುಕ್ತ ಮಂತ್ರಾಲಯವು 1999ನೇ ಸಾಲಿಗೆ ವೃದ್ಧರಿಗೆ ರಾಷ್ಟ್ರೀಯ ನೀತಿಯನ್ನು ರೂಪಿಸಿರುತ್ತದೆ. ಈ ನೀತಿಯು ವೃದ್ಧರಿಗೆ ಸಂಬಂಧಿಸಿದ ಕಾಳಜಿಗಳು ರಾಷ್ಟ್ರದ ಕಳಕಳಿಯಾಗಿದ್ದು, ಇವರು ಅಸುರಕ್ಷಿತವಾಗಿರುವುದಿಲ್ಲ ಮತ್ತು ಇವರನ್ನು ಅಲಕ್ಷಿಸಿರುವುದಿಲ್ಲವೆಂಬುದನ್ನು ಭಾವಿಸುತ್ತದೆ. ಈ ನೀತಿಯಂತೆ ರಾಜ್ಯ ಸರ್ಕಾರವೂ ಸಹ ಕರ್ನಾಟಕ ರಾಜ್ಯ ಹಿರಿಯ ನಾಗರೀಕರಿಗೆ ಕಾರ್ಯ ನೀತಿಯನ್ನು ರೂಪಿಸಿ ಕ್ರಮಾಂಕ (1) ರಲ್ಲಿ ಓದಲಾದಂತೆ ಆದೇಶವನ್ನು ಹೊರಡಿಸಿದೆ. ಸದರಿ ನೀತಿಯ ಮುಖ್ಯ ಉದ್ದೇಶವು ಹಿರಿಯ ನಾಗರೀಕರ ರಕ್ಷಣೆ ಆರೋಗ್ಯ ಹಾಗೂ ಇತರೆ ಅಗತ್ಯ ಅವಶ್ಯಕತೆಗಳನ್ನು ಗಮನಿಸುವುದಾಗಿರುತ್ತದೆ. ಕರ್ನಾಟಕ ರಾಜ್ಯದಲ್ಲಿ ಶೇ. 7 ರಷ್ಟು ಜನಸಂಖ್ಯೆಯಲ್ಲಿ ಹಿರಿಯ ನಾಗರೀಕರು ಇರುತ್ತಾರೆ. ಹಿರಿಯ ನಾಗರೀಕರ ಕಾರ್ಯ ನೀತಿಯನ್ನು ಅನುಷ್ಠಾನಗೊಳಿಸಲು ಮಾನ್ಯ ಮುಖ್ಯಮಂತ್ರಿಯವರು 2004-2005ನೇ ಸಾಲಿನ ಆಯವ್ಯಯದ ಭಾಷಣದಲ್ಲಿ ಹಿರಿಯ ನಾಗರೀಕರ ಕಲ್ಯಾಣಕ್ಕಾಗಿ ಕಾರ್ಯಕ್ರಮಗಳನ್ನು ಘೋಷಿಸಿರುತ್ತಾರೆ. ಅದರಂತೆ ಅಂಗವಿಕಲರ ಕಲ್ಯಾಣ ಇಲಾಖೆಯಲ್ಲಿ ಒಂದು ಪ್ರತ್ಯೇಕವಾದ ವಿಭಾಗವನ್ನು ಸೃಜಿಸಿ ಇದರ ಅನುಷ್ಠಾನಕ್ಕಾಗಿ ಬೇಕಾಗುವ ಎಲ್ಲಾ ಸೌಕರ್ಯಗಳನ್ನು ಒದಗಿಸಲು ನಿರ್ಧರಿಸಲಾಗಿದೆ.

ನಿರ್ದೇಶಕರು, ಅಂಗವಿಕಲರ ಹಾಗೂ ಹಿರಿಯ ನಾಗರೀಕರ ಕಲ್ಯಾಣ ಇಲಾಖೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ದಿನಾಂಕ: 26.3.2004ರ ಪತ್ರದಲ್ಲಿ, ಕರ್ನಾಟಕ ರಾಜ್ಯದಲ್ಲಿ ಹಿರಿಯ ನಾಗರೀಕರಿಗಾಗಿ ರಾಜ್ಯ ನೀತಿಯನ್ನು ಜಾರಿಗೊಳಿಸಿದೆ. ಸದರಿ ನೀತಿಯನ್ವಯ ಹಿರಿಯ ನಾಗರೀಕರ ರಕ್ಷಣೆ, ಆರೋಗ್ಯ ಹಾಗೂ ಇತರೆ ಅಗತ್ಯ ಅವಶ್ಯಕತೆಗಳನ್ನು ಗಮನಿಸುವುದು. ಸರ್ಕಾರದ ಆದ್ಯಕರ್ತವ್ಯವಾಗಿರುತ್ತದೆ. ಹಿರಿಯ ನಾಗರೀಕರಿಗೆ ಸಮಾಜದ ಎಲ್ಲಾ ಚಟುವಟಿಕೆಗಳಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸುವುದು ಪ್ರಮುಖ ಉದ್ದೇಶವಾಗಿರುತ್ತದೆ ಹಾಗೂ ಹಿರಿಯ ನಾಗರೀಕರಲ್ಲಿ ಅಡಗಿರುವ ಸಂಪನ್ಮೂಲ ಶಕ್ತಿಯನ್ನು ಉಪಯೋಗಿಸಿಕೊಂಡು ದೇಶದ ಅಭಿವೃದ್ಧಿಗಾಗಿ ಶ್ರಮಿಸುವುದು ಆದ್ಯ ಕರ್ತವ್ಯವಾಗಿರುತ್ತದೆ. ಈ ಎಲ್ಲಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಬೆಂಗಳೂರು, ಬೆಳಗಾಂ, ಹುಬ್ಬಳ್ಳಿ ಮತ್ತು ಧಾರವಾಡ, ಗುಲ್ಬರ್ಗಾ ಜಿಲ್ಲೆಗಳ ನಗರ ಪಾಲಿಕೆ ವ್ಯಾಪ್ತಿಯಲ್ಲಿ ನಗರಪಾಲಿಕೆ ಸಹಯೋಗದೊಂದಿಗೆ ಹಗಲು ಯೋಗ ಕ್ಷೇಮ ಕೇಂದ್ರವನ್ನು ಸರ್ಕಾರೇತರ ಸೇವಾ ಸಂಸ್ಥೆಗಳ ಮುಖಾಂತರ ನಡೆಸಲು ಉದ್ದೇಶಿಸಲಾಗಿದ್ದು, 50 ಫಲಾನುಭವಿಗಳಿಗೆ ಎಲ್ಲಾ ಸೌಕರ್ಯಗಳನ್ನು ಒದಗಿಸಲು, ಹಗಲು ಯೋಗಕ್ಷೇಮ ಕೇಂದ್ರಗಳನ್ನು ಪ್ರಾರಂಭಿಸಲು ಆದೇಶವನ್ನು ನೀಡಬೇಕೆಂದು ಕೋರಿರುತ್ತಾರೆ. ನಿರ್ದೇಶಕರ ಪ್ರಸ್ತಾವನೆಯನ್ನು ವಿವರವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 246 ಎಸ್‌ಜೆಡಿ 2004, ಬೆಂಗಳೂರು, ದಿನಾಂಕ: 26ನೇ ಅಕ್ಟೋಬರ್ 2004**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯದ ಬೆಂಗಳೂರು, ಬೆಳಗಾಂ, ಹುಬ್ಬಳ್ಳಿ, ಧಾರವಾಡ ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿ ಒಟ್ಟು 4 ಹಗಲು ಯೋಗ ಕ್ಷೇಮ ಕೇಂದ್ರಗಳನ್ನು ಹಿರಿಯ ನಾಗರೀಕರಿಗೆ ಆರೋಗ್ಯ ರಕ್ಷಣೆ ಹಾಗೂ ಇತರೆ ಅಗತ್ಯ ಅವಶ್ಯಕತೆಗಳನ್ನು ಒದಗಿಸುವುದಕ್ಕಾಗಿ ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ. ಪ್ರತಿ ಕೇಂದ್ರವೊಂದಕ್ಕೆ ವಾರ್ಷಿಕ ರೂ. 5,15,000/- (ಐದು ಲಕ್ಷದ ಹದಿನೈದು ಸಾವಿರ ರೂಪಾಯಿಗಳು ಮಾತ್ರ) ಗಳಂತೆ ಒಟ್ಟು ರೂ. 20.60 ಲಕ್ಷಗಳ ವೆಚ್ಚದಲ್ಲಿ ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ '2235-02-104-02-04' ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 6.9.2004 ರಂದು ನಡೆದ ಅಧಿಕಾರಯುಕ್ತ ಸಮಿತಿಯು ನೀಡಿದ ಅನುಮೋದನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1218

**ಪ್ರ.ದ. ಸಿದ್ಧಾಂತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ರಾಷ್ಟ್ರೀಯ ಕೃಷಿ ವಿಮಾ ಯೋಜನೆಯನ್ನು 2004-05ನೇ ಹಿಂಗಾರು ಹಾಗೂ ಬೇಸಿಗೆ ಹಂಗಾಮುಗಳಲ್ಲಿ ಬೆಳೆ ಮತ್ತು ಹೋಬಳಿಗಳ ಘೋಷಣೆ ಬಗ್ಗೆ - ಆದೇಶಗಳು.

**ಓದಲಾಗಿದೆ:** 1) ಸರ್ಕಾರದ ಆದೇಶದ ಸಂಖ್ಯೆ:ಕೃತೋಇ -155/ಕೃಉಇ/98(ಪಿ)/2000; ದಿನಾಂಕ:11-5-2000.

2) ರಾಜ್ಯಮಟ್ಟದ ಬೆಳೆ ವಿಮಾ ಸಮನ್ವಯ ಸಮಿತಿ ಸಭೆಯ ದಿನಾಂಕ:21-09-2004ರ ನಡವಳಿಗಳು.

3) ಕೃಷಿ ಆಯುಕ್ತರ ಪತ್ರದ ಸಂಖ್ಯೆ:ಬೆವಿಘ/ತಾಂ/ರಾಕೃವಿಯೋ/ಹಿಂ-ಬೇ-04-05/ಅ.ಸೂ/2004-05; ದಿನಾಂಕ:14-10-2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ(1)ರಲ್ಲಿನ ಸರ್ಕಾರಿ ಆದೇಶದನ್ವಯ 2000ನೇ ಸಾಲಿನ ಮುಂಗಾರು ಹಂಗಾಮಿನಿಂದ ರಾಷ್ಟ್ರೀಯ ಕೃಷಿ ವಿಮಾ ಯೋಜನೆಯನ್ನು ಕರ್ನಾಟಕ ರಾಜ್ಯದಲ್ಲಿ ಘೋಷಿಸಿದ ಬೆಳೆಗಳು ಮತ್ತು ತಾಲ್ಲೂಕುಗಳಿಗೆ ಅನುಷ್ಠಾನಗೊಳಿಸಲು ಅಧಿಸೂಚನೆ ಹೊರಡಿಸಲಾಗಿದೆ.

ದಿನಾಂಕ:21-9-2004ರಂದು ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ಜರುಗಿದ ರಾಜ್ಯಮಟ್ಟದ ಬೆಳೆ ವಿಮಾ ಸಮನ್ವಯ ಸಮಿತಿ ಸಭೆಯಲ್ಲಿ 2004-05ನೇ ಸಾಲಿನಲ್ಲಿಯೂ ಸದರಿ ಯೋಜನೆಯನ್ನು ಮುಂದುವರಿಸಲು ತೀರ್ಮಾನಿಸಿದ್ದು, 19 ಬೆಳೆಗಳಾದ ಭತ್ತ (ನೀರಾವರಿ), ಜೋಳ (ನೀರಾವರಿ), ಜೋಳ (ಮಳೆ ಆಶ್ರಿತ), ರಾಗಿ (ನೀರಾವರಿ), ರಾಗಿ (ಮಳೆ ಆಶ್ರಿತ), ಮುಸುಕಿನ ಜೋಳ (ನೀರಾವರಿ), ಮುಸುಕಿನ ಜೋಳ (ಮಳೆ ಆಶ್ರಿತ), ಗೋಧಿ (ನೀರಾವರಿ), ಗೋಧಿ (ಮಳೆ ಆಶ್ರಿತ), ಕಡಲೆ (ನೀರಾವರಿ), ಕಡಲೆ (ಮಳೆ ಆಶ್ರಿತ), ಉದ್ದು (ಮಳೆ ಆಶ್ರಿತ), ಹುರುಳಿ (ಮಳೆ ಆಶ್ರಿತ), ಹೆಸರು (ಮಳೆ ಆಶ್ರಿತ), ಅಗಸೆ (ಮಳೆ ಆಶ್ರಿತ), ಸೂರ್ಯಕಾಂತಿ (ನೀರಾವರಿ), ಸೂರ್ಯಕಾಂತಿ (ಮಳೆ ಆಶ್ರಿತ), ಕುಸುಮೆ (ಮಳೆ ಆಶ್ರಿತ) ಮತ್ತು ಆಲೂಗೆಡ್ಡೆ (ನೀರಾವರಿ) ಇವುಗಳನ್ನು 2004-05ರ ಹಿಂಗಾರು ಹಂಗಾಮಿಗೆ ಹೋಬಳಿ ಮಟ್ಟಕ್ಕೆ ಹಾಗೂ 4 ಬೆಳೆಗಳಾದ ಭತ್ತ (ನೀರಾವರಿ), ರಾಗಿ (ನೀರಾವರಿ), ನೆಲಗಡಲೆ (ಶೇಂಗಾ) (ನೀರಾವರಿ) ಮತ್ತು ಸೂರ್ಯಕಾಂತಿ (ನೀರಾವರಿ) ಇವುಗಳನ್ನು 2004-05ರ ಬೇಸಿಗೆ ಹಂಗಾಮಿಗೆ ಹೋಬಳಿ ಮಟ್ಟಕ್ಕೆ ಅಧಿಸೂಚಿಸಲು ತೀರ್ಮಾನಿಸಲಾಯಿತು. ಮೇಲೆ ತಿಳಿಸಿದ ಎಲ್ಲಾ ಬೆಳೆಗಳ ಮತ್ತು ಹೋಬಳಿಗಳ ಪಟ್ಟಿಯನ್ನು ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಯ ನಿರ್ದೇಶಕರು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ(3)ರಲ್ಲಿ ಕೃಷಿ ಆಯುಕ್ತರು, ಬೆಂಗಳೂರು ಇವರು ರಾಜ್ಯಮಟ್ಟದ ಬೆಳೆ ವಿಮಾ ಸಮನ್ವಯ ಸಮಿತಿ ಸಭೆಯು ತೆಗೆದುಕೊಂಡ ತೀರ್ಮಾನದಂತೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿ ಸೂಕ್ತ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶವನ್ನು ನೀಡಲಾಗಿದೆ.

**ಸರ್ಕಾರದ ಆದೇಶದ ಸಂಖ್ಯೆ:ಕೃತೋಇ/424/ಕೃಉಇ/2004, ಬೆಂಗಳೂರು ; ದಿನಾಂಕ: 15th October 2004**

ಕರ್ನಾಟಕ ರಾಜ್ಯದಲ್ಲಿ ರಾಷ್ಟ್ರೀಯ ಕೃಷಿ ವಿಮಾ ಯೋಜನೆಯಡಿಯಲ್ಲಿ ಬೆಳೆಗಳಾದ ಭತ್ತ (ನೀರಾವರಿ), ಜೋಳ (ನೀರಾವರಿ), ಜೋಳ (ಮಳೆ ಆಶ್ರಿತ), ರಾಗಿ (ನೀರಾವರಿ), ರಾಗಿ (ಮಳೆ ಆಶ್ರಿತ), ಮುಸುಕಿನ ಜೋಳ (ನೀರಾವರಿ), ಮುಸುಕಿನ ಜೋಳ (ಮಳೆ ಆಶ್ರಿತ), ಗೋಧಿ (ನೀರಾವರಿ), ಗೋಧಿ (ಮಳೆ ಆಶ್ರಿತ), ಕಡಲೆ (ನೀರಾವರಿ), ಕಡಲೆ (ಮಳೆ ಆಶ್ರಿತ), ಉದ್ದು (ಮಳೆ ಆಶ್ರಿತ), ಹುರುಳಿ (ಮಳೆ ಆಶ್ರಿತ), ಹೆಸರು (ಮಳೆ ಆಶ್ರಿತ), ಅಗಸೆ (ಮಳೆ ಆಶ್ರಿತ), ಸೂರ್ಯಕಾಂತಿ (ನೀರಾವರಿ), ಸೂರ್ಯಕಾಂತಿ (ಮಳೆ ಆಶ್ರಿತ), ಕುಸುಮೆ (ಮಳೆ ಆಶ್ರಿತ) ಮತ್ತು ಆಲೂಗೆಡ್ಡೆ (ನೀರಾವರಿ) ಇವುಗಳನ್ನು 2004-05ರ ಹಿಂಗಾರು ಹಂಗಾಮಿಗೆ ಹೋಬಳಿ ಮಟ್ಟಕ್ಕೆ ಹಾಗೂ ಬೆಳೆಗಳಾದ ಭತ್ತ (ನೀರಾವರಿ), ರಾಗಿ (ನೀರಾವರಿ), ನೆಲಗಡಲೆ (ಶೇಂಗಾ) (ನೀರಾವರಿ) ಮತ್ತು ಸೂರ್ಯಕಾಂತಿ (ನೀರಾವರಿ) ಇವುಗಳನ್ನು 2004-05ರ ಬೇಸಿಗೆ ಹಂಗಾಮಿಗೆ ಹೋಬಳಿ ಮಟ್ಟಕ್ಕೆ ಅಳವಡಿಸಿ ಅನುಷ್ಠಾನಗೊಳಿಸಲು ಈ ಮೂಲಕ ಮಂಜೂರಾತಿ ನೀಡಲಾಗಿದೆ.

2004-05ರ ಹಿಂಗಾರು ಮತ್ತು ಬೇಸಿಗೆ ಹಂಗಾಮಿನಲ್ಲಿ ರಾಷ್ಟ್ರೀಯ ಕೃಷಿ ವಿಮಾ ಯೋಜನೆಯ ಅನುಷ್ಠಾನಕ್ಕಾಗಿ ಆಯ್ದ ಬೆಳೆಗಳು ಮತ್ತು ಹೋಬಳಿಗಳ ಸಂಖ್ಯೆಯನ್ನು ಕೆಳಗೆ ಕೊಡಲಾಗಿದೆ.

| ಕ್ರ. ಸಂ. | ಬೆಳೆಗಳು | ಹೋಬಳಿಗಳ ಸಂಖ್ಯೆ |
|---|---|---|
| **2004-05ರ ಹಿಂಗಾರು** | | |
| 1 | ಭತ್ತ (ನೀರಾವರಿ) | 50 |
| 2 | ಜೋಳ (ನೀರಾವರಿ) | 81 |
| 3 | ಜೋಳ (ಮಳೆ ಆಶ್ರಿತ) | 304 |
| 4 | ರಾಗಿ (ನೀರಾವರಿ) | 20 |
| 5 | ರಾಗಿ (ಮಳೆ ಆಶ್ರಿತ) | 50 |
| 6 | ಮುಸುಕಿನ ಜೋಳ (ನೀರಾವರಿ) | 54 |
| 7 | ಮುಸುಕಿನ ಜೋಳ (ಮಳೆ ಆಶ್ರಿತ) | 11 |
| 8 | ಗೋಧಿ (ನೀರಾವರಿ) | 94 |
| 9 | ಗೋಧಿ (ಮಳೆ ಆಶ್ರಿತ) | 116 |
| 10 | ಕಡಲೆ (ನೀರಾವರಿ) | 63 |
| 11 | ಕಡಲೆ (ಮಳೆ ಆಶ್ರಿತ) | 219 |
| 12 | ಉದ್ದು (ಮಳೆ ಆಶ್ರಿತ) | 13 |

| ಕ್ರ. ಸಂ. | ಬೆಳೆಗಳು | ಹೋಬಳಿಗಳ ಸಂಖ್ಯೆ |
|---|---|---|
| 13 | ಹುರುಳಿ (ಮಳೆ ಆಶ್ರಿತ) | 211 |
| 14 | ಹೆಸರು (ಮಳೆ ಆಶ್ರಿತ) | 7 |
| 15 | ಅಗಸೆ (ಮಳೆ ಆಶ್ರಿತ) | 36 |
| 16 | ಸೂರ್ಯಕಾಂತಿ (ನೀರಾವರಿ) | 114 |
| 17 | ಸೂರ್ಯಕಾಂತಿ (ಮಳೆ ಆಶ್ರಿತ) | 199 |
| 18 | ಕುಸುಮೆ (ಮಳೆ ಆಶ್ರಿತ) | 163 |
| 19 | ಆಲೂಗೆಡ್ಡೆ (ನೀರಾವರಿ) | 26 |
| **2004-05ರ ಬೇಸಿಗೆ** | | |
| 1 | ಭತ್ತ (ನೀರಾವರಿ) | 162 |
| 2 | ರಾಗಿ (ನೀರಾವರಿ) | 8 |
| 3 | ನೆಲಗಡಲೆ (ಶೇಂಗಾ) (ನೀರಾವರಿ) | 176 |
| 4 | ಸೂರ್ಯಕಾಂತಿ (ನೀರಾವರಿ) | 84 |

ಮೇಲೆ ನಮೂದಿಸಿದ ಬೆಳೆವಾರು ಹೋಬಳಿಗಳ ಪಟ್ಟಿಯನ್ನು ಅನುಬಂಧ - 1ರಲ್ಲಿ ನೀಡಲಾಗಿದೆ.

2004-05ರ ಹಿಂಗಾರು ಮತ್ತು ಬೇಸಿಗೆ ಹಂಗಾಮಿನ ಬೆಳೆಗಳಿಗೆ ನಿಗದಿಪಡಿಸಲಾಗಿರುವ ಇಂಡೆಮ್ನಿಟಿ ಮಟ್ಟ, ವಿಮಾ ಮೊತ್ತ ಮತ್ತು ವಿಮಾ ಕಂತಿನ ವಿವರಗಳನ್ನು ಅನುಬಂಧ - 2ರಲ್ಲಿ ನೀಡಲಾಗಿದೆ.

ಈ ಯೋಜನೆಯಡಿಯಲ್ಲಿ ಬೆಳೆ ಸಾಲ ಪಡೆಯದ ರೈತರು ಬೆಳೆ ಬಿತ್ತಿದ / ನಾಟಿ ಮಾಡಿದ ನಂತರ 30 ದಿವಸಗಳೊಳಗಿರುವ ಬೆಳೆಗಳಿಗೆ ಮಾತ್ರ ವಿಮಾ ಕಂತು ಕಟ್ಟಿ ಅರ್ಜಿಯನ್ನು ಸಲ್ಲಿಸತಕ್ಕದ್ದು ಹಾಗೂ ಬೆಳೆಯು ನೊಂದಾಯಿಸುವ ಸಮಯದಲ್ಲಿ ಆರೋಗ್ಯಕರವಾಗಿರತಕ್ಕದ್ದು.

ಈ ಯೋಜನೆಗೆ ಒಳಪಡುವ ವಿವಿಧ ಬೆಳೆಗಳಿಗೆ ಬೆಳೆ ಸಾಲ ಪಡೆಯದ ರೈತರು ಬ್ಯಾಂಕುಗಳಿಗೆ ಘೋಷಣೆಗಳನ್ನು ಸಲ್ಲಿಸಲು ನಿಗಧಿಪಡಿಸಿರುವ ಅಂತಿಮ ದಿನಾಂಕ ಈ ಕೆಳಕಂಡಂತಿದೆ.

ಅ) ಹಿಂಗಾರು ಹಂಗಾಮಿಗೆ : 31 - 12 - 2004

ಆ) ಬೇಸಿಗೆ ಹಂಗಾಮಿಗೆ : 28 - 02 - 2005

ಹಾಗೂ ಈ ಯೋಜನೆಯಡಿಯಲ್ಲಿ ಬೆಳೆ ಸಾಲ ಪಡೆಯದ ರೈತರು ಬೆಳೆ ಬಿತ್ತಿದ / ನಾಟಿ ಮಾಡಿದ ನಂತರ 30 ದಿವಸದೊಳಗೆ ಅಥವಾ ಮೇಲೆ ನಿಗಧಿಪಡಿಸಿರುವ ದಿನಾಂಕದೊಳಗೆ ಯಾವುದು ಮುಂಚೆಯೋ ಅದರೊಳಗೆ ಬ್ಯಾಂಕಿಗೆ ಘೋಷಣೆಗಳನ್ನು ಸಲ್ಲಿಸತಕ್ಕದ್ದು. ಮೇಲೆ ನಿಗಧಿಪಡಿಸಿದ ದಿನಾಂಕದ ನಂತರ ಸಲ್ಲಿಸಿದ ಅರ್ಜಿಗಳನ್ನು ತಿರಸ್ಕರಿಸುವುದು.

ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ವಿಮಾ ಕಂತಿನ ಮೇಲೆ ಶೇಕಡ 10ರ ಸಹಾಯಧನವನ್ನು ನೀಡತಕ್ಕದ್ದು.

ನಿರ್ದೇಶಕರು, ಅರ್ಥಿಕ ಮತ್ತು ಸಾಂಖ್ಯಿಕ ಇಲಾಖೆ, ಇವರು ಅಧಿಸೂಚಿತ ಬೆಳೆಗಳಿಗೆ ಹೋಬಳಿವಾರು ಬೆಳೆ ಕಟಾವು ಪ್ರಯೋಗಗಳನ್ನು ನಡೆಸಲು ಬೆಳೆ ಕಟಾವು ಪ್ರಯೋಗಗಳ ಯೋಜನೆ ಹಾಗೂ ಮೂಲ ಕಾರ್ಯಕರ್ತರುಗಳಿಗೆ ತರಬೇತಿಯ ಸೂಕ್ತ ವ್ಯವಸ್ಥೆ ಮಾಡತಕ್ಕದ್ದು.

ಕೃಷಿ ಮತ್ತು ಕಂದಾಯ ಹಾಗೂ ಸಂಬಂಧಪಟ್ಟ ಇಲಾಖೆಗಳು ಯೋಜನೆಯನ್ನು ಅನುಷ್ಠಾನಗೊಳಿಸುವ ಸಂಸ್ಥೆಯು ಕೈಗೊಳ್ಳುವ ಪ್ರಚಾರ, ಪ್ರಕಟಣೆ ಮತ್ತು ತರಬೇತಿ ನೀಡುವಲ್ಲಿ ಸಹಕಾರ ನೀಡಬೇಕು.

ಕೃಷಿ ಇಲಾಖೆ, ಕಂದಾಯ ಇಲಾಖೆ, ಸಹಕಾರ ಇಲಾಖೆ ಹಾಗೂ ಸಂಬಂಧಪಟ್ಟ ಇಲಾಖೆಗಳು 2004-05ರ ಹಿಂಗಾರು ಮತ್ತು ಬೇಸಿಗೆ ಹಂಗಾಮಿನಲ್ಲಿ ಅಧಿಸೂಚನೆ ನೀಡಿರುವ ಬೆಳೆಗಳು ಮತ್ತು ಹೋಬಳಿಗಳ ಬಗ್ಗೆ ಬ್ಯಾಂಕುಗಳ, ರೈತ ಸಂಪರ್ಕ ಕೇಂದ್ರಗಳ ಮತ್ತು ಗ್ರಾಮ ಪಂಚಾಯತಿ ಕಛೇರಿಗಳ ಸೂಚನಾ ಫಲಕಗಳ ಮೇಲೆ ಪ್ರಕಟಿಸಿ ವ್ಯಾಪಕ ಪ್ರಚಾರ ಕೈಗೊಳ್ಳಲು ಸೂಚಿಸಿದೆ.

ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಟಾನಗೊಳಿಸುವಲ್ಲಿ ಅನುಷ್ಟಾನ ಸಂಸ್ಥೆಯಾದ ಭಾರತೀಯ ಕೃಷಿ ವಿಮಾ ಕಂಪನಿ ನಿಯಮಿತ ಇವರು ಬೆಳೆ ವಿಮಾ ಯೋಜನೆಯಲ್ಲಿ ಭಾಗವಹಿಸಲಿರುವ ವಿವಿಧ ಸಂಸ್ಥೆಗಳ ಜೊತೆಯಲ್ಲಿ ಸಮನ್ವಯ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ವಿ.ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ಅನುಬಂಧ - 1**

**ಸರ್ಕಾರದ ಆದೇಶದ ಸಂಖ್ಯೆ:ಕೃತೋಇ/424/ಕೃಉಇ/2004, ಬೆಂಗಳೂರು ; ದಿನಾಂಕ:15-10-2004.**

**2004-05ರ ಹಿಂಗಾರು ಹಂಗಾಮಿನಲ್ಲಿ ರಾಷ್ಟ್ರೀಯ ಕೃಷಿ ವಿಮಾ ಯೋಜನೆಯಡಿಯಲ್ಲಿ ಒಳಗೊಂಡ ಹೋಬಳಿ ಮತ್ತು ಬೆಳೆಗಳ ಪಟ್ಟಿ**

| ಕ್ರ. ಸಂ. | ಜಿಲ್ಲೆ / ತಾಲ್ಲೂಕು / ಹೋಬಳಿ | | ಬೆಳೆಗಳು |
|---|---|---|---|
| 1 | ಬೆಂಗಳೂರು (ನಗರ) ಜಿಲ್ಲೆ | | |
| 1 | ಆನೇಕಲ್ | | |
| | 1 | ಆನೇಕಲ್ | ಹುರುಳಿ (ಮಳೆ ಆಶ್ರಿತ) |
| | 2 | ಹತ್ತಿಬೆಲೆ | ಹುರುಳಿ (ಮಳೆ ಆಶ್ರಿತ) |
| | 3 | ಜಿಗಣಿ | ಹುರುಳಿ (ಮಳೆ ಆಶ್ರಿತ) |
| | 4 | ಸರ್ಜಾಪುರ | ಹುರುಳಿ (ಮಳೆ ಆಶ್ರಿತ) |
| 2 | ಬೆಂಗಳೂರು (ಗ್ರಾಮಾಂತರ) ಜಿಲ್ಲೆ | | |
| 2 | ಚನ್ನಪಟ್ಟಣ | | |
| | 5 | ಚನ್ನಪಟ್ಟಣ | ಹುರುಳಿ (ಮಳೆ ಆಶ್ರಿತ) |
| | 6 | ಮಳೂರು | ಹುರುಳಿ (ಮಳೆ ಆಶ್ರಿತ) |
| | 7 | ವಿರೂಪಾಕ್ಷಿಪುರ | ಹುರುಳಿ (ಮಳೆ ಆಶ್ರಿತ) |
| 3 | ಕನಕಪುರ | | |
| | 8 | ದೊಡ್ಡಮರಳವಾಡಿ | ಹುರುಳಿ (ಮಳೆ ಆಶ್ರಿತ) |
| | 9 | ಹಾರೋಹಳ್ಳಿ | ಹುರುಳಿ (ಮಳೆ ಆಶ್ರಿತ) |
| | 10 | ಕನಕಪುರ | ಹುರುಳಿ (ಮಳೆ ಆಶ್ರಿತ) |
| | 11 | ಕೋಡಿಹಳ್ಳಿ | ಹುರುಳಿ (ಮಳೆ ಆಶ್ರಿತ) |
| | 12 | ಸಾತನೂರು | ಹುರುಳಿ (ಮಳೆ ಆಶ್ರಿತ) |
| | 13 | ಉಯ್ಯಂಬಳ್ಳಿ | ಹುರುಳಿ (ಮಳೆ ಆಶ್ರಿತ) |
| 4 | ಹೊಸಕೋಟೆ | | |
| | 14 | ಸೂಲಿಬೆಲೆ | ಆಲೂಗೆಡ್ಡೆ (ನೀರಾವರಿ) |
| 3 | ಬಾಗಲಕೋಟೆ ಜಿಲ್ಲೆ | | |
| 5 | ಬಾದಾಮಿ | | |
| | 15 | ಬಾದಾಮಿ | ಜೋಳ (ಮಳೆ ಆಶ್ರಿತ), ಗೋಧಿ (ನೀರಾವರಿ), ಕಡಲೆ (ಮಳೆ ಆಶ್ರಿತ), ಸೂರ್ಯಕಾಂತಿ (ನೀರಾವರಿ), ಸೂರ್ಯಕಾಂತಿ (ಮಳೆ ಆಶ್ರಿತ), ಹುರುಳಿ (ಮಳೆ ಆಶ್ರಿತ), ಅಗಸೆ (ಮಳೆ ಆಶ್ರಿತ) |
| | 16 | ಗುಳೇದಗುಡ್ಡ | ಜೋಳ (ಮಳೆ ಆಶ್ರಿತ), ಗೋಧಿ (ನೀರಾವರಿ), ಕಡಲೆ (ಮಳೆ ಆಶ್ರಿತ), ಸೂರ್ಯಕಾಂತಿ (ನೀರಾವರಿ), ಸೂರ್ಯಕಾಂತಿ (ಮಳೆ ಆಶ್ರಿತ), ಹುರುಳಿ (ಮಳೆ ಆಶ್ರಿತ), ಅಗಸೆ (ಮಳೆ ಆಶ್ರಿತ) |
| | 17 | ಕೆರೂರು | ಜೋಳ (ಮಳೆ ಆಶ್ರಿತ), ಗೋಧಿ (ನೀರಾವರಿ), ಗೋಧಿ (ಮಳೆ ಆಶ್ರಿತ), ಕಡಲೆ (ಮಳೆ ಆಶ್ರಿತ), ಸೂರ್ಯಕಾಂತಿ (ನೀರಾವರಿ), ಸೂರ್ಯಕಾಂತಿ (ಮಳೆ ಆಶ್ರಿತ), ಹುರುಳಿ (ಮಳೆ ಆಶ್ರಿತ), ಅಗಸೆ (ಮಳೆ ಆಶ್ರಿತ) |
| | 18 | ಕುಳಗೇರಿ | ಜೋಳ (ನೀರಾವರಿ), ಜೋಳ (ಮಳೆ ಆಶ್ರಿತ), ಗೋಧಿ (ನೀರಾವರಿ), ಗೋಧಿ (ಮಳೆ ಆಶ್ರಿತ), ಕಡಲೆ (ನೀರಾವರಿ), ಕಡಲೆ (ಮಳೆ ಆಶ್ರಿತ), ಸೂರ್ಯಕಾಂತಿ (ನೀರಾವರಿ), ಸೂರ್ಯಕಾಂತಿ (ಮಳೆ ಆಶ್ರಿತ), ಹುರುಳಿ (ಮಳೆ ಆಶ್ರಿತ), ಅಗಸೆ (ಮಳೆ ಆಶ್ರಿತ), ಕುಸುಮೆ (ಮಳೆ ಆಶ್ರಿತ) |

